ನಾಗವರ್ಮ ವಿರಚಿತ

# ಶ್ರೀ ಚಂದ್ರಚೂಡಾಮಣಿ ಶತಕಂ

## (ಜ್ಞಾನಸಾರಂ)

ಸಂಪಾದಕ :

ಪ್ರೊ|| ಎಂ. ವಿ. ಸೀತಾರಾಮಯ್ಯ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

54, 3ನೇ ಅಡ್ಡಬೀದಿ, ಗವಿಪುರಂ ವಿಸ್ತರಣ

ಬೆಂಗಳೂರು–19.

1989

ಬೆಲೆ : ರೂ. 10-00

CHANDRACHOODAMANI SHATAKAM : A collection of 103 verses, also called JNYANASARAM, by Nagavarma. 12th century poet, expounding ascetic values based on Advaita philosophy. Critically edited by Prof. M. V. Seetha Ramaiah, and published by B.M.Sri Memorial Foundation, 54, 3rd cross, Gavipuram Extension, Bangalore - 560019.

Demy octavo Pp. 53 + xi. Price : Rs. 10-00.

First Edition, 1989.



Published with the Financial Assistance of the Govt. of India, The National Archives of India, New Delhi.

Printed by :

SRI LAKSHMI PRINTERS
Near Katharaguppe
Banashankari III Stage
Bangalore-560 085

# ಪೀಠಿಕೆ

'ಶ್ರೀ ಚಂದ್ರಚೂಡಾಮಣಿಶತಕ'ವು ಆ ಹೆಸರಿನಿಂದ ಪ್ರಖ್ಯಾತವಾಗಿದ್ದರೂ ಕೃತಿಕರ್ತೃ ಅದಕ್ಕೆ ಇಟ್ಟಿರುವ ಅರ್ಥಪೂರ್ಣವಾದ ಹೆಸರು 'ಜ್ಞಾನಸಾರಂ'. ಕೃತಿಯ ಹೆಸರು ಉಕ್ತವಾಗಿರುವ ಪದ್ಯದಲ್ಲಿಯೇ ಕೃತಿಕಾರನ ಹೆಸರೂ ದೊರೆಯುತ್ತದೆ:

ಉದಯಾದಿತ್ಯನ ಸಂಧಿವಿಗ್ರಹಿ ಲಲಾಮಂ ನಾಗವರ್ಮಂ ಸಮಂ-
ತುದಯಾದಿತ್ಯನ ರಾಯಭಾರಿಯೆನಿಸಿರ್ದಾತ್ಮಾಗ್ರಜಂ ಭಾಸ್ಕರಂ
ಮೊದಲಾದೀಶ್ವರಭಕ್ತರಪ್ಪಿವರ್ಗೆ ಪೇಳ್ದೀ ಜ್ಞಾನಸಾರಂ ಸುಖಾ-
ಸ್ಪದಮೊಲ್ದೀದುಗೆ ಭುಕ್ತಿಮುಕ್ತಿಫಲಮಂ ಶ್ರೀ ಚಂದ್ರಚೂಡಾಮಣೀ

**ಕೃತಿನಾಮ**: ನಾವು ಬಳಸಿಕೊಂಡಿರುವ ಹಸ್ತಪ್ರತಿಯ ಸಮಾಪ್ತಿವಾಕ್ಯದಲ್ಲಿ ಚಂದ್ರಚೂಡಾಮಣಿ ಶತಕ ಎಂದು ಉಕ್ತವಾಗಿರುವುದರಿಂದಲೂ ಪ್ರತಿಪದ್ಯಾಂತದ ಇಷ್ಟ-ದೈವ ಮುದ್ರಿಕೆಯೇ ಕೃತಿಯ ಹೆಸರಾಗುವುದು ಅಸಂಭವವಲ್ಲವಾದ್ದರಿಂದಲೂ 'ಚಂದ್ರ-ಚೂಡಾಮಣಿಶತಕ' ಎಂಬುದೇ ಕೃತಿನಾಮವೆಂದೂ 'ಜ್ಞಾನಸಾರಂ' ಎಂಬುದು ಕೃತಿಯ ವಿಷಯದ್ಯೋತಕವಾಗಿದ್ದು ಈ ಹೆಸರು ಕವಿಗೆ ಪ್ರಿಯವಾದ ಅನ್ವರ್ಥನಾಮವೆಂದೂ ಹೇಳಬಹುದಾಗಿದೆ.

**ಕರ್ತೃ**: ನಾಗವರ್ಮ—ಮೇಲ್ಕಂಡ ಪದ್ಯದಲ್ಲಿ ಉಕ್ತವಾದ ನಾಗವರ್ಮನೇ ಕೃತಿಕಾರನೆಂಬುದರಲ್ಲಿ ನಮಗೆ ಈಗ ಎಳ್ಳಷ್ಟೂ ಸಂದೇಹವಿಲ್ಲ. 'ಕನ್ನಡ ಶತಕ ಸಾಹಿತ್ಯದ ಆದ್ಯ ಪ್ರವರ್ತಕರು' ಎಂಬ ತಮ್ಮ ಸುದೀರ್ಘ ಲೇಖನದಲ್ಲಿ ಉದಯಾದಿತ್ಯನೆ ಕೃತಿಕಾರ ಎಂದು ಸಾಧಿಸಲು ಪ್ರೊ॥ ಸಿ. ಮಹಾದೇವಪ್ಪನವರು ಪ್ರಯತ್ನಪಟ್ಟಿದ್ದಾರೆ.[1] ಅವರು ಅನ್ವಾಯಾರ್ಥ ಮಾಡಿರುವ ಪ್ರಕಾರ, 'ಉದಯಾದಿತ್ಯನ ಪೇಳ್ದ' ಎಂಬಲ್ಲಿ ಕರ್ತೃರ್ಥದಲ್ಲಿ ಪ್ರಥಮೆಗೆ ಬದಲು ಷಷ್ಠಿವಿಭಕ್ತಿ ಪ್ರಯೋಗವಾಗಿ, 'ಪೇಳ್ದ' ಎಂಬ ಕ್ರಿಯೆಗೆ 'ಉದಯಾದಿತ್ಯ' ಕರ್ತೃಪದ. ಪ್ರಥಮೆಯ ಅರ್ಥದಲ್ಲಿ ಷಷ್ಠಿ ಪ್ರಯೋಗವಾಗುವುದು ವ್ಯಾಕರಣ ಶಾಸ್ತ್ರ ಸಮ್ಮತ. ("ನೃಪಂ ಪೇೞ್ಗೆ" ಎಂಬುದಕ್ಕೆ "ನೃಪನ ಪೇೞ್ಗೆ": ಶ.ಮ.ದ ಸೂತ್ರ ೧೪೫). ಆದರೆ, ತಮ್ಮ ಬಳಿ ಇರುವ ಹಸ್ತಪ್ರತಿಗಳ ಪಾಠಾಂತರಗಳಲ್ಲಿ ತಮಗೆ ಅನುಕೂಲವಾದುದೆಂದು ಭಾವಿಸಿ, 'ಆತ್ಮಾಗ್ರಜಂ' ಎಂಬ ಉಚಿತವಾದ ಪಾಠಕ್ಕೆ ಬದಲಾಗಿ ಆತಗ್ರಜಂ ಎಂಬ ಸಂಧಿದೋಷವುಳ್ಳ ಪಾಠವನ್ನು ಸ್ವೀಕರಿಸಿದ್ದಾರೆ. ಉದಯಾದಿತ್ಯ ಎಂಬ ಅಕಾರಾಂತ ಪದಕ್ಕೆ 'ಅ' ಷಷ್ಠಿಪ್ರತ್ಯಯ ಸೇರಿ 'ಉದಯಾದಿತ್ಯನ' ಎಂದು ಆಗಿರುವಂತೆ ಆತ + ಅ = ಆತನ (ನಕಾರಾಗಮ) (ಅಥವಾ, ಆತನ್ + ಅ = ಆತನ) ಎಂದಾಗಬೇಕು. ನಮಗೆ ದೊರೆತ ಹಸ್ತಪ್ರತಿಯಲ್ಲಿ 'ಆತ್ಮಾಗ್ರಜಂ' ಎಂಬ ಸ್ವೀಕಾರಾರ್ಹ

---

1 'ಸಿದ್ಧಗಂಗಾ ಶ್ರೀ' (ಸುವರ್ಣ ಸಂಪುಟ, 1981 ; ಪುಟ 150)

ವಾದ ಪಾಠವೇ ಇದೆ. ಕವಿಚರಿತೆಕಾರರು ಉದ್ಧೃತಮಾಡಿರುವ ಪದ್ಯದಲ್ಲಿಯೂ 'ಆತ್ಮಾಗ್ರಜಂ' ಎಂಬ ಸರಿಯಾದ ಪಾಠವನ್ನು ಇಟ್ಟುಕೊಂಡಾಗ ಅದು 'ನಾಗವರ್ಮಂ' ಎಂಬ ನಾಮಪದಕ್ಕೆ ಅನ್ವಯವಾಗುತ್ತದೆ; ಎಂದರೆ 'ನಾಗವರ್ಮನ ಆತ್ಮಾಗ್ರಜ' ಎಂದಾಗುತ್ತದೆ. ಅಲ್ಲದೆ, 'ಉದಯಾದಿತ್ಯನ' ಎಂಬ ಷಷ್ಠ್ಯಂತ ಪದ ಎರಡು ಸಲ ಪ್ರಯೋಗವಾಗಿರುವುದನ್ನು ಗಮನಿಸಬೇಕು. ಉದಯಾದಿತ್ಯನೇ ಗ್ರಂಥಕರ್ತೃವಾಗಿದ್ದರೆ, ಎರಡನೆಯ ಸಲ 'ಉದಯಾದಿತ್ಯನ' ಎಂದು ಖಂಡಿತ ಪ್ರಯೋಗಿಸುತ್ತಿರಲಿಲ್ಲ, 'ಸಮಂತಾತನ' (ಇಲ್ಲವೆ, ಸಮಂತೆನ್ನ) ರಾಯಭಾರಿ ಎಂಬ ಅರ್ಥ ಬರುವಂತೆ ಪ್ರಯೋಗಿಸುತ್ತಿದ್ದ.

ಪದಪ್ರಯೋಗಗಳ ಆಕಾಂಕ್ಷೆಯನ್ನು ಗಮನಿಸೋಣ: ಯಾರು ಯಾರಿಗೆ ಏನನ್ನು ಹೇಳಿದರು? 'ಪೇೞ್ದ ಈ ಜ್ಞಾನಸಾರಂ' ಎಂಬಲ್ಲಿಯ ಕೃದಂತದ ಕ್ರಿಯೆ ಪೇೞ್; ಹೇಳಿದವರು ಯಾರು ಎಂಬುದಕ್ಕೆ 'ನಾಗವರ್ಮಂ' ಎಂಬ ಉತ್ತರ ಸ್ವಯಂ ಸ್ಪಷ್ಟ.[1] ಈ ನಾಗವರ್ಮ ಸಂಧಿವಿಗ್ರಹಿ ಅಲ್ಲವು. 'ಯಾವಾತನ ಸಂಧಿವಿಗ್ರಹಿ' ಎಂಬ ಪ್ರಶ್ನೆಗೆ 'ಉದಯಾದಿತ್ಯನ' 'ಸಂಧಿವಿಗ್ರಹಿ' ಎಂದು ಸರಳವಾದ ಉತ್ತರ ದೊರೆತು, ಆಕಾಂಕ್ಷೆ ಪೂರೈಕೆಯಾಗುತ್ತದೆ. ಪದ್ಯದಲ್ಲಿ 'ಭಾಸ್ಕರಂ' ಎಂಬ ಇನ್ನೊಂದು ವ್ಯಕ್ತಿನಾಮವಿದೆ. ಈ ಭಾಸ್ಕರ ಯಾರು? ಉದಯಾದಿತ್ಯನ ರಾಯಭಾರಿ. ಈ ರಾಯಭಾರಿ ಎನಿಸಿದ್ದ ಭಾಸ್ಕರ ಮೊದಲಾದ ಈಶ್ವರಭಕ್ತರಿಗೆ 'ಪೇೞ್ದ' ಈ 'ಜ್ಞಾನಸಾರಂ' ಸುಖಾಸ್ಪದವಾದದ್ದು.

ಕೃತಿಕರ್ತೃ ನಾಗವರ್ಮ ಎಂದು ಇಟ್ಟುಕೊಂಡರೆ ಈ ನಾಗವರ್ಮ ಯಾರು ಎಂಬುದು ಮುಂದಿನ ಪ್ರಶ್ನೆ.

ಪ್ರಾಚೀನ ಕನ್ನಡ ಕವಿಪರಂಪರೆಯಲ್ಲಿ ಹಲವರು ನಾಗವರ್ಮರು ಆಗಿಹೋಗಿದ್ದಾರೆ: (೧) 'ಕರ್ಣಾಟಕದ ಕಾದಂಬರಿ'ಯ ಕರ್ತೃ ನಾಗವರ್ಮ; (೨) 'ಛಂದೋಂಬುಧಿ'ಯ

---

1 ಆರ್. ನರಸಿಂಹಾಚಾರ್ಯರು ಕವಿಚರಿತೆಯಲ್ಲಿ 'ನಾಗವರ್ಮ'ನು ಜ್ಞಾನಸಾರಂ ಎಂಬ ಚಂದ್ರಚೂಡಾಮಣಿ ಶತಕವನ್ನು ಬರೆದವನು ಎಂದು ಸರಿಯಾಗಿಯೆ ಅರ್ಥಯಿಸಿದ್ದರು. ಅವರ ಅನ್ವಯಾರ್ಥ ಸರಿಯಲ್ಲ ಎಂದು ನಾನು 'ಮಹಲಿಂಗರಂಗ'ನನ್ನು ಕುರಿತ ನನ್ನ ಲೇಖನದಲ್ಲಿ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. 5, ಪು. 132 ಮತ್ತು 146; ಬೆಂಗಳೂರು ವಿಶ್ವವಿದ್ಯಾಲಯ, 1982) ತಿಳಿಸಿದ್ದೆನು. ಈಗ ಈ ಪದ್ಯವನ್ನು ಅಧ್ಯಯನ ಮಾಡಿದ ಮೇಲೆ ಆಚಾರ್ಯರ ಅಭಿಪ್ರಾಯ ಸರಿ, ನನ್ನದು ತಪ್ಪು, ಎಂದು ತೋರುತ್ತಿದೆ. ಇದಕ್ಕಾಗಿ ವಿಷಾದಿಸುತ್ತೇನೆ. ಅದೇ ಲೇಖನದಲ್ಲಿ, ಶತಕದಲ್ಲಿ 199 ಪದ್ಯಗಳಿವೆ, ಆದ್ದರಿಂದ ಇದು ಶತಕಗ್ರಂಥವಾಗುವುದಿಲ್ಲ ಎಂದೂ ಹೇಳಿದ್ದೆ. ನನ್ನ ಹೇಳಿಕೆಗೆ ಆಧಾರ, ಕವಿಚರಿತೆ II (1972ರ ಮುದ್ರಣ, ಪು. 113–114): ಅಲ್ಲಿ ಉದ್ಧರಿಸಿ ಕೊಟ್ಟಿರುವ 3 ಪದ್ಯಗಳಿಗೆ ಕ್ರಮವಾಗಿ 197, 198, 199 ಎಂದಿರುವುದು ಗ್ರಂಥದ ಎಲ್ಲ ಉದಾಹೃತ ಪದ್ಯಗಳಿಗೆ ಕೊಟ್ಟ ಕ್ರಮಾಂಕವಾಗಿದ್ದು, ನನ್ನ ಹೇಳಿಕೆ ಅನವಧಾನದಿಂದಾದ ತಪ್ಪು. ಪ್ರೊ॥ ಸಿ. ಮಹಾದೇವಪ್ಪನವರು ಈ ತಪ್ಪಿನ ಕಡೆಗೆ ನನ್ನ ಗಮನ ಸೆಳೆದು ಉಪಕಾರ ಮಾಡಿದ್ದಾರೆ. (ತನ್ನ ತಪ್ಪು ಗ್ರಹಿಕೆಯನ್ನು ಸಾಧಿಸುವುದಕ್ಕಿಂತ ಅದನ್ನು ಒಪ್ಪಿಕೊಳ್ಳುವುದು ಪ್ರಾಮಾಣಿಕನಾದ ಸಂಶೋಧಕನ ಕರ್ತವ್ಯ.)

ನಾಗವರ್ಮ; (೩) ವರ್ಧಮಾನಪುರಾಣ, ಕಾವ್ಯಾವಲೋಕನ ಮತ್ತು ವಸ್ತು ಕೋಶಗಳ ನಾಗವರ್ಮ (ಇವನು ಎರಡನೆಯ ನಾಗವರ್ಮ ಎಂದು ಪ್ರಸಿದ್ಧ. ಕಾರಣ, 'ಕಾದಂಬರಿ'ಯು ಹಾಗೂ 'ಛಂದೋಂಬುಧಿ'ಯು ಕವಿ ಒಬ್ಬನೇ ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದರು.) ಚಂದ್ರಚೂಡಾಮಣಿ ಶತಕದ ಕರ್ತೃವಿನ ಬಗೆಗೆ ಕವಿಚರಿತೆಕಾರರು ಹೀಗೆ ಅಭಿಪ್ರಾಯಪಟ್ಟಿದ್ದಾರೆ:

> "ಶಿಕಾರಿಪುರದ 129ನೆಯ ಶಾಸನದಿಂದ (1072) ಚಾಳುಕ್ಯರಾಜನಾದ ಭುವನೈಕಮಲ್ಲನಲ್ಲಿ (1069–1076) 'ಶ್ರೀಮನ್ಮಹಾಪ್ರಧಾನಂ ಹಿರಿಯ ಸಂಧಿವಿಗ್ರಹಿ ಮನೆವೆರ್ಗಡೆ ದಂಡನಾಯಕಂ' ಆದ ಉದಯಾದಿತ್ಯನ ಕಾಲದಲ್ಲಿ ಬಹಳ ಪ್ರಸಿದ್ಧನಾದ ಅದ್ವೈತಿ ಗುಣಗಳ್ಳ ನಾಗವರ್ಮಾಚಾರ್ಯನೆಂಬವನೊಬ್ಬನು ಇದ್ದಂತೆ ತಿಳಿಯುತ್ತದೆ. ಈ ನಾಗವರ್ಮನೇ ಕವಿಯಾಗಿರಬಹುದೆಂದು ಊಹಿಸುತ್ತೇವೆ. ಹಾಗಿದ್ದಪಕ್ಷದಲ್ಲಿ ಸುಮಾರು 1071ರಲ್ಲಿ ಇದ್ದಿರಬೇಕು."[1]

ನಾಗವರ್ಮರಂತೆಯೇ ಉದಯಾದಿತ್ಯರೂ ಅನೇಕ ಮಂದಿ ಇದ್ದಾರೆ. ಕವಿಚರಿತಕಾರರೇ ನಂ. 51ನೆಯದು ಮುಂತಾದ ಕೆಲವು ಬೇರೆಯ ಶಿಕಾರಿಪುರ ಶಾಸನಗಳಲ್ಲಿ ಉಕ್ತನಾಗಿರುವ ಬ್ರಹ್ಮಕ್ಷತ್ರವಂಶದ ಉದಯಾದಿತ್ಯನು ಬೇರೆ ಎಂದು ತಿಳಿಸಿದ್ದಾರೆ.[2]

ಪ್ರೊ|| ಮಹಾದೇವಪ್ಪನವರು—ಚಂದ್ರಚೂಡಾಮಣಿ ಶತಕದ ಕವಿ ಉದಯಾದಿತ್ಯ, ಅವನ ಈ ಕೃತಿಯಲ್ಲಿ "ಲಿಂಗಾಂಗಸಂಗಾದ್ವೈತ ಭಾವನೆಯೂ ಜೀವಶಿವೈಕ್ಯತಾ ದೃಷ್ಟಿಯೂ, ಪ್ರಸಾದಲಿಂಗಪ್ರಸಾದಿತ್ವವೂ, ಇಷ್ಟಲಿಂಗಧಾರಣೆಯಲ್ಲಿನ ನಿಷ್ಠೆಯೂ ಸುವ್ಯಕ್ತವಾಗಿರುವುದನ್ನಿಲ್ಲಿ ಕಾಣುತ್ತೇವೆ. ಸತ್–ಆನಂದ–ದಯಾಪಯೋರಾಶಿಯಲ್ಲಿ ಓಲಾಡುವ ಬಯಕೆಯಲ್ಲಿ ಜೈನಾಗಮಾದ್ವೈತ ದಯಾಮೂಲಧರ್ಮವೂ ಶಕ್ತಿವಿಶಿಷ್ಟಾದ್ವೈತದ ಜೀವಶಿವೈಕ್ಯತಾಲಿಂಗಾಂಗ ಸಾಮರಸ್ಯವೂ ಅಭಿವ್ಯಕ್ತವಾಗಿದೆ" ಎಂದು ಹೇಳಿ, ಕೃತಿಕಾರನ ಹೆಸರು ಮತ್ತು ಮತಧರ್ಮದ ಬಗೆಗೆ ತಮ್ಮ ಲೇಖನದಲ್ಲಿ ಸವಿಸ್ತಾರವಾಗಿ ಹೇಳಿದ್ದಾರೆ. ಮತ್ತು ಈ ಕೃತಿ ಶಾಂಕರ ಅದ್ವೈತವನ್ನು ಸ್ಪಷ್ಟವಾಗಿ ನಿರಾಕರಣೆ ಮಾಡುತ್ತದೆ ಎಂದೂ ಅಭಿಪ್ರಾಯಪಡುತ್ತಾರೆ. ಕೃತಿಕಾರ ಉದಯಾದಿತ್ಯ ಎಂದು ನಂಬಿರುವ ಅವರು ಪೂರ್ವೋಕ್ತ ಶಿಕಾರಿಪುರ ಶಾಸನದ ಉದಯಾದಿತ್ಯ (ಕ್ರಿ.ಶ. 1072) ಅಲ್ಲ ಎಂದೂ ತಿಳಿದಿರುವಂತಿದೆ. ಆದರೆ ಈತ ಯಾವ ಉದಯಾದಿತ್ಯ ಎಂದು ಖಚಿತವಾಗಿ ತಿಳಿಸಿರುವಂತೆ ಕಂಡುಬರುವುದಿಲ್ಲ. ಚಂದ್ರಚೂಡಾಮಣಿ ಶತಕದಲ್ಲಿ ಅಲ್ಲಮಪ್ರಭು, ಬಸವಣ್ಣ, ಹರಿಹರ, ತುರುಗಾಹಿ ರಾಮಣ್ಣ (ಸು.ಕ್ರಿ.ಶ. ೧೧೬೭) ಮುಂತಾದ ಪ್ರಮುಖ ವೀರಶೈವ ಲೇಖಕರ ಪ್ರಭಾವವನ್ನು ಉದಾಹರಣಸಹಿತ ಚಂದ್ರಚೂಡಾಮಣಿ ಶತಕದ ಹಲಕೆಲವು ಪದ್ಯಗಳಲ್ಲಿ ಗುರುತಿಸಲು ಪ್ರಯತ್ನಪಟ್ಟಿರುವುದರಿಂದ, ಅವರ ಅಭಿಪ್ರಾಯದಲ್ಲಿ, ಕೃತಿಯ ಕಾಲ ಸ್ಥೂಲವಾಗಿ 12ನೆಯ ಶತಮಾನ ಎಂದಾಗುತ್ತದೆ.

---

1 ಕವಿಚರಿತೆ, ಸಂ. II, 1972; ಪು. 113–114. 2 ಅದೇ.

ಆರ್. ನರಸಿಂಹಾಚಾರ್ಯರು ಶತಕದ ಕರ್ತೃ ನಾಗವರ್ಮನನ್ನು ಶಿಕಾರಿಪುರ ಶಾಸನದಲ್ಲಿ ಹೇಳಿರುವ ಭುವನೈಕಮಲ್ಲನಲ್ಲಿ ಹಿರಿಯ ಸಂಧಿವಿಗ್ರಹಿ ಆಗಿದ್ದ ಉದಯಾದಿತ್ಯನ ಕಾಲದಲ್ಲಿದ್ದ ಅದ್ವೈತಮುನಿ ಗುಣಗಳ್ಳ ನಾಗವರ್ಮಾಚಾರ್ಯನೊಂದಿಗೆ ಸಮೀಕರಿಸಿರುತ್ತಾರಷ್ಟೆ. ಅವರ ಈ ಊಹೆಯಲ್ಲಿ ಒಂದು ತೊಡಕಿದೆ. ಶತಕದ ಕರ್ತೃ ನಾಗವರ್ಮನು ಉದಯಾದಿತ್ಯನ 'ಸಂಧಿವಿಗ್ರಹಿಲಲಾಮ' ; ಈ ಸಂಧಿವಿಗ್ರಹಿ ಸಂಧಿವಿಗ್ರಹಿಯೇ ಆದ ಉದಯಾದಿತ್ಯನ ಸಂಧಿವಿಗ್ರಹಿಯಾಗಿರುವುದು ಹೇಗೆ ಸಾಧ್ಯ? ಆದ್ದರಿಂದ, ಶತಕಪದ್ಯದಲ್ಲಿ ಹೇಳಿರುವ ಉದಯಾದಿತ್ಯ ಶಿಕಾರಿಪುರದ ಶಾಸನಗಳ ಉದಯಾದಿತ್ಯ ಆಗಲಾರನು. ಈತ ಬೇರೆಯ ಇನ್ನೊಬ್ಬ ಉದಯಾದಿತ್ಯನಾಗಿರಬೇಕು, ಎಂದು ನಮಗೆ ತೋರುತ್ತದೆ.

ಈ ಸಂದರ್ಭದಲ್ಲಿ 'ಉದಯಾದಿತ್ಯಾಲಂಕಾರ' ದ ಉದಯಾದಿತ್ಯ ಪ್ರಸ್ತುತನಾಗುತ್ತಾನೆ. ಈ ಉದಯಾದಿತ್ಯ ಯಾರಿರಬಹುದು ಎನ್ನುವುದಕ್ಕೆ ಪ್ರಬಲವಾದ ಆಂತರಿಕ ಪ್ರಮಾಣ ಈ ಕೆಳಗಿನ ಪದ್ಯ :

> ಎಸೆದೀ ಕಾವ್ಯಶರೀರಮಂ ಪೊಸಯಿಸಿರ್ದಷ್ಟಾದಶಾಂಗಂಗಳಂ
> ರಸರೀತಿಕ್ರಮದಿಂದವೊಂದಿದ ದಶಪ್ರಾಣಂಗಳೊಂದಂದಮಂ
> ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯನಿಂ-
> ತುಸಿರ್ದಂ ಪೇಟ್ದಪನಿನ್ನಲಂಕೃತಿಗಳಂ ಸಾಹಿತ್ಯರತ್ನಾಕರಂ

'ಉದಯಾದಿತ್ಯಾಲಂಕಾರ'ವನ್ನು ಬರೆದವನು ಉದಯಾದಿತ್ಯ, ಚೋಳೋದಯಾದಿತ್ಯ ಎಂದು ಹೇಳಿಕೊಂಡಿರುವುದರಿಂದ ಈತನು ಅವನೋ ಒಬ್ಬ ಸೋಮನಾಥನೆಂಬ ಚೋಳರಾಜನ ಮಗನೆಂದು ತಿಳಿಯುತ್ತದೆ ಎಂದು ಅಭಿಪ್ರಾಯಪಟ್ಟು, ಉದಯಾದಿತ್ಯನ ಕಾಲವನ್ನು ಸು. 1150 ಎಂದು ಕವಿಚರಿತಕಾರರು ಊಹಿಸಿದ್ದಾರೆ.[1]

ಉದಯಾದಿತ್ಯಾಲಂಕಾರವನ್ನು ಮೊತ್ತಮೊದಲಿಗೆ ಎಂ. ಎ. ರಾಮಾನುಜಯ್ಯಂಗಾರರೂ ಎಸ್. ಜಿ. ನರಸಿಂಹಾಚಾರ್ಯರೂ ಕೂಡಿ ಸಂಪಾದನೆ ಮಾಡಿ 1894ರಲ್ಲಿ ಕರ್ಣಾಟಕ ಕಾವ್ಯಮಂಜರಿ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದರು. ಇದನ್ನು ನಾನು ಬೇರೊಂದು ಹಸ್ತಪ್ರತಿಯ ಸಹಾಯದಿಂದ ಪುನಃ ಪರಿಷ್ಕರಣ ಮಾಡಿದೆನು. (ಈ ಪರಿಷ್ಕೃತ ಮುದ್ರಣ ಮೈಸೂರಿನ ಡಿ. ವಿ. ಕೆ. ಮೂರ್ತಿ ಅವರಿಂದ 1970ರಲ್ಲಿ ಪ್ರಕಟವಾಗಿದೆ.) ಈ ದ್ವಿತೀಯ ಮುದ್ರಣದಲ್ಲಿ ಕವಿಕಾವ್ಯವಿಚಾರವನ್ನು ವಿಸ್ತಾರವಾಗಿ ವಿಮರ್ಶೆ ಮಾಡಿ, ನನ್ನ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿರುವೆನು: "ಉದಯಾದಿತ್ಯಾಲಂಕಾರಗ್ರಂಥದ ಪ್ರಥಮ ಮುದ್ರಣದ ಸಂಪಾದಕರೂ ಕವಿಚರಿತ್ರಕಾರರೂ ತಿಳಿಸಿರುವಂತೆ ಉದಯಾದಿತ್ಯಾಲಂಕಾರದ ಕರ್ತೃ ಉದಯಾದಿತ್ಯನಲ್ಲ, ಅವನ ಆಶ್ರಿತ ಕವಿ,–ಎಂಬುದು ನಮ್ಮ ಖಚಿತ ಅಭಿಪ್ರಾಯ."

---

1 ಕವಿಚರಿತೆ 1, 1972, ಪು. 179.

ಕಾದಂಬರಿಯ ನಾಗವರ್ಮನೇ ಬೇರೆ, ಛಂದೋಂಬುಧಿಯನ್ನು ಬರೆದವನೇ ಬೇರೆ ಎಂಬ ಕವಿಚರಿತಕಾರರ ಊಹೆಗೆ ಉಪಷ್ಟಂಭಕವಾದ ಪ್ರಮಾಣಗಳನ್ನು ಅವರೇ ಹೇಳಿರುವುದರಿಂದ ಛಂದೋಂಬುಧಿಯ ಕರ್ತೃ ನಾಗವರ್ಮ 10ನೇ ಶತಮಾನದವನಾಗಬೇಕಿಲ್ಲ. ಅವನ ಕಾಲವನ್ನು ಇನ್ನೂ ಈಚೆಗೆ ತಳ್ಳಬಹುದು. ಇದರಿಂದ, ಉದಯಾದಿತ್ಯನ ಆಶ್ರಿತ ಕವಿಯೆ ಛಂದೋಂಬುಧಿಯನ್ನು ಬರೆದಿರಬಹುದು ಎಂಬ ನನ್ನ ಊಹೆಗೆ ಅವಕಾಶವಾಯಿತು. ಕಾಕತೀಯ ರುದ್ರದೇವನ ಹನುಮಕೊಂಡ ಶಾಸನ (ಕ್ರಿ.ಶ. 1162–63) ದಲ್ಲಿ ಉಕ್ತನಾದ ಉದಯ, ಆಂಧ್ರಪ್ರದೇಶದ ಮಾಮಿಳ್ಳಪಲ್ಲಿ ಶಾಸನ (ಕ್ರಿ.ಶ. 1178) ಮತ್ತು ಪಾನುಗಲ್ ಶಾಸನ (ಕ್ರಿ.ಶ. 1124) ಗಳಲ್ಲಿ ಉಕ್ತನಾದ ಉದಯಾದಿತ್ಯ, ಇವರುಗಳು ತೆಲುಗು ಚೋಡವಂಶದ ದೊರೆಗಳಾಗಿದ್ದು, ಇವರುಗಳ ಉಲ್ಲೇಖ ಒಬ್ಬನೇ ಚೋಳೋದಯಾದಿತ್ಯನನ್ನು ಕುರಿತದ್ದು ಎಂಬ ತೀರ್ಮಾನಕ್ಕೆ ಬಂದಿರುವುದಾಗಿದೆ. 'ಉದಯಾದಿತ್ಯಾಲಂಕಾರ' ದಲ್ಲಿ ಆತನನ್ನು ಉದಯ, ಉದೆಗ ಎಂಬ ಸಂಕ್ಷಿಪ್ತನಾಮಗಳಿಂದ ಸಂಬೋಧನೆ ಮಾಡಿರುವುದು ಈ ತೀರ್ಮಾನಕ್ಕೆ ಅವಕಾಶ ಕೊಡುತ್ತದೆ. ಈ ಉದಯಾದಿತ್ಯನ ಕಾಲವೇ ಅವನ ಆಶ್ರಿತಕವಿಯ ಕಾಲವಾಗುತ್ತದೆ, ಎಂದರೆ ಸು. ಕ್ರಿ.ಶ. 1100–1160. ಈ ಉದಯಾದಿತ್ಯನೇ 'ಚಂದ್ರಚೂಡಾಮಣಿಶತಕ' ಪದ್ಯದಲ್ಲಿ ಹೇಳಿರುವ ಉದಯಾದಿತ್ಯ ಎಂಬುದು ಸದ್ಯದಮಟ್ಟಿಗೆ ನಮ್ಮ ತೀರ್ಮಾನ.[1]

ಈ ಶತಕದ ಮೇಲೆ ಹರಿಹರಾದಿಗಳ ಪ್ರಭಾವ ಇದೆಯೆಂದು ಮಹಾದೇವಪ್ಪನವರು ಅಭಿಪ್ರಾಯಪಟ್ಟಿರುವುದನ್ನು ಈ ಮೊದಲು ಪ್ರಸ್ತಾವಿಸಿದೆಯಷ್ಟೆ. ಶತಕದ ನಾಗವರ್ಮ ಅವರಿಗಿಂತ ಹಿಂದಿನವನಾದ್ದರಿಂದ ಅವನ ಪ್ರಭಾವ ಇವರ ಮೇಲೆ ಆಗಿರಬಾರದೇಕೆ? ಹೇಗೂ ಈ ಶತಕ ಕನ್ನಡದ ಮೊದಲ ಶತಕ ಎಂಬ ಅಭಿಪ್ರಾಯ ನಿಲ್ಲತಕ್ಕದ್ದು.

'ಉದಯಾದಿತ್ಯಾಲಂಕಾರ' ದ ಮತ್ತು ಚಂದ್ರಚೂಡಾಮಣಿ ಶತಕದಲ್ಲಿ ಉಕ್ತನಾದ ಉದಯಾದಿತ್ಯ ಒಬ್ಬನೇ ಆಗಿರುವ ಸಂದರ್ಭದಲ್ಲಿ, ಶತಕದ ಕವಿ ಒಬ್ಬ ನಾಗವರ್ಮನೆಂಬುದು ನಮ್ಮ ನಿಲುವಾಗಿರುವುದರಿಂದ, ಉದಯಾದಿತ್ಯಾಲಂಕಾರದ ಕರ್ತೃವೂ ಒಬ್ಬ ನಾಗವರ್ಮನೇ ಎಂಬ ಊಹೆ ಸಂಭಾವ್ಯ ಎನಿಸುತ್ತದೆ. ಕೆಳದೀ, ಅಬ್ಜದಳನೇತ್ರೇ, ಅಂಬುಜವದನೇ ಮುಂತಾಗಿ ಕವಿ ಪತ್ನಿಯನ್ನು ಸಂಬೋಧಿಸಿ ಹೇಳಿರುವುದು ಛಂದೋಂಬುಧಿಯಲ್ಲಿ ಸರ್ವಸಾಮಾನ್ಯವಾಗಿ ಕಂಡುಬರುತ್ತದೆ. ಉದಯಾದಿತ್ಯಾಲಂಕಾರದ ಕೆಲವು ಪದ್ಯಗಳಲ್ಲಿ ಉದಯಾದಿತ್ಯಾ, ರಾಜಸುಕವಿರತ್ನಾಭರಣಾ, ಉದೆಗ, ಉದೆಗನೃಪ ಇತ್ಯಾದಿಯಾಗಿ ಉದಯಾದಿತ್ಯರಾಜನನ್ನು ಕುರಿತು ಅಲಂಕಾರ ವಿಚಾರವನ್ನು ವ್ಯಾವರ್ಣನೆಮಾಡಿದಂತೆ ಸಂಬೋಧನೋಕ್ತಿಯಿದ್ದರೂ ಎರಡು ಪದ್ಯಗಳಲ್ಲಿ (ಪ. 47, 48) ಕೆಳದಿ, ಅಬ್ಜಲೋಚನೇ ಎಂದು ತನ್ನ ಪ್ರಿಯೆಯನ್ನು ಕುರಿತು ಹೇಳಿದಂತೆಯೂ ಸಂಬೋಧನೆ ನುಸುಳಿದೆ.

---

1 ಹೆಚ್ಚಿನ ವಿವರಗಳಲ್ಲಿ ಆಸಕ್ತಿಯುಳ್ಳವರು 'ಉದಯಾದಿತ್ಯಾಲಂಕಾರ'ದ ಪೀಠಿಕೆಯನ್ನು ನೋಡಬಹುದು.

ಇದರಿಂದ, ಛಂದೋಂಬುಧಿಯನ್ನು ಬರೆದ ಕವಿಯೆ ಉದಯಾದಿತ್ಯಾಲಂಕಾರವನ್ನೂ ಬರೆದಿರಬಾರದೇಕೆ ಎಂಬ ಸಂದೇಹದ ಪ್ರಶ್ನೆ ಸಹಜವಾಗಿಯೇ ತಲೆದೋರುತ್ತದೆ. ಹೀಗೆ, ಛಂದೋಂಬುಧಿ, ಉದಯಾದಿತ್ಯಾಲಂಕಾರ, ಒಂದು ಶತಕ—ಈ ಮೂರನ್ನೂ ಒಬ್ಬ ನಾಗವರ್ಮ ಬರೆದಿರಬಹುದಲ್ಲವೆ ಎಂಬ ಸಂಭಾವ್ಯವಾದ ಪ್ರಮೇಯ ವಿಚಾರಾರ್ಹವಾಗಿದೆ. ಇದು ನಿರ್ವಿವಾದವಾದ ನಿರ್ಣಯವಲ್ಲ ಎಂದು ಒತ್ತಿ ಹೇಳಬಯಸುತ್ತೇನೆ.

ಮತಧರ್ಮದ ದೃಷ್ಟಿಯಿಂದಲೂ ಈ ಪ್ರಮೇಯಕ್ಕೆ ಸಮರ್ಥನೆ ದೊರೆಯುತ್ತದೆ. ಶತಕದ ಕರ್ತೃ ನಾಮವರ್ಮ ಎಂಬುದು ನಮ್ಮ ನಿಶ್ಚಿತವಷ್ಟೆ. ನಾಗವರ್ಮ ಎಂಬ ಹೆಸರಿನವನು ಬ್ರಾಹ್ಮಣನಾಗಿರಬೇಕು, ಇಲ್ಲವೆ ಜೈನನಾಗಿರಬೇಕು. ಭಾಸ್ಕರ ಎಂಬ ಹೆಸರೂ ಸಾಧಾರಣವಾಗಿ ವಿಪ್ರ ಇಲ್ಲವೆ ಜೈನಸಂಬಂಧಿ. ಶತಕದ ಕವಿ ನಾಗವರ್ಮ ಎಂಬುದನ್ನು ಒಪ್ಪಿಕೊಂಡರೆ ವೀರಶೈವ ಕರ್ತೃತ್ವದ ವಾದಕ್ಕೆ ಎಲ್ಲಿ ಧಕ್ಕೆ ಬರುತ್ತದೆಯೋ ಎಂಬ ಆಶಂಕೆಯಿಂದ ನನ್ನ ಮಿತ್ರರು ಉದಯಾದಿತ್ಯನೇ ಗ್ರಂಥಕರ್ತ ಎಂಬ ವಾದವನ್ನು ಹೂಡಿ, ಪದ್ಯಗಳಲ್ಲಿ ಸಹಜವಾಗಿ ದೊರೆಯದ ಲಿಂಗ, ಅಲ್ಲಮ, ಇತ್ಯಾದಿ ವೀರಶೈವ ಪರ ಪದಗಳನ್ನು ಹೆಕ್ಕಿ ತೆಗೆಯಲು ಬಲು ಪ್ರಯಾಸಪಟ್ಟಿದ್ದಾರೆ. ಶತಕಕಾರನ ಶೈಲಿ ಪ್ರಹೇಳಿಕಾಮಾರ್ಗದ್ದು, ಅನೇಕ ಕಡೆ ಶ್ಲಿಷ್ಟಾರ್ಥವುಳ್ಳದ್ದು, ಗೂಢಾರ್ಥವುಳ್ಳದ್ದು ಎಂಬ ಆಶ್ಚರ್ಯಕರವಾದ ಶೋಧಗಳನ್ನು ಮಾಡಿದ್ದಾರೆ. ಆದರೆ ಸೂರ್ಯಪರ್ಯಾಯವಾದ ಉದಯಾದಿತ್ಯ ಹೆಸರಿನವನು ವೀರಶೈವನಾಗಿರಲು ಸಾಧ್ಯವಿಲ್ಲ; ಈಶ್ವರಭಕ್ತನೇನೋ ಹೌದು ನಾಗವರ್ಮನೂ ಶೈವ, ಅದ್ವೈತಿ ಎಂಬ ಬಗೆಗೆ ನಮಗಂತೂ ಸಂದೇಹವಿಲ್ಲ.

ಚಂದ್ರಚೂಡಾಮಣಿ ಶತಕ ತೀವ್ರವಾದ ವೈರಾಗ್ಯವನ್ನು ಪ್ರತಿಪಾದಿಸುತ್ತದೆ. ಜೈನಧರ್ಮ, ಬೌದ್ಧಧರ್ಮ ಮತ್ತು ಅದ್ವೈತಕ್ಕೆ ಮಾತ್ರ ತೀವ್ರ ವೈರಾಗ್ಯದ ನಿಲುವು ಗ್ರಾಹ್ಯ. ಶತಕಕಾರ ಎಲ್ಲ ದುಃಖಕ್ಕೂ ಆಶೆಯೇ, ತೃಷ್ಣೆಯೇ ಮೂಲ ಎಂಬ ಬೌದ್ಧ ತತ್ತ್ವವನ್ನು ಬೆಂಬಲಿಸುತ್ತಾನೆ. ಸಕಲ ಪ್ರಾಣಿಗಳನ್ನೂ ದಯೆಯಿಂದ ಕಾಣಬೇಕು ಎಂಬ ಬೌದ್ಧ ಜೈನ ದೃಷ್ಟಿ ಶತಕಕಾರನಿಗೆ ಸಮ್ಮತ; 'ಶಂ ದ್ವಿಪದೇ ಶಂ ಚತುಷ್ಪದೇ' ಎಂಬುದು ಉಪನಿಷತ್ತುಗಳ ನಿಲವು ಕೂಡ ಈ ದೃಷ್ಟಿಯುಳ್ಳವನಾದ್ದರಿಂದಲೇ ಒಂದು ಪದ್ಯದಲ್ಲಿ (ಪ. ೯೩), "ಜೈನ ಬೌದ್ಧರನೇಳಿಪ್ಪರು ನಿಮ್ಮನೇಳಿಸಿದವರ್" ಎಂದು ಕವಿ ಉದ್ಗಾರ ತೆಗೆದಿರುವುದು. ಶಂಕರಾಚಾರ್ಯರು ಪ್ರಚ್ಛನ್ನ ಬೌದ್ಧ ಎಂಬ ಪ್ರತೀತಿಗೆ ಒಳಗಾದದ್ದು ಏಕೆ? ಬೌದ್ಧರ ಶೂನ್ಯಕ್ಕೂ ಅದ್ವೈತದ ಮಾಯಾವಾದಕ್ಕೂ ಸಾಮ್ಯವಿರುವುದರಿಂದಲ್ಲವೆ? ಜೈನ-ಧರ್ಮ ಆತ್ಮವನ್ನು ಒಪ್ಪಿಕೊಂಡದ್ದರಿಂದ ಭರತಖಂಡದಲ್ಲಿ ಉಳಿಯಿತು. ಪಂಪನ ಪೂರ್ವಜ ಜೈನಧರ್ಮವನ್ನು ಅಂಗೀಕರಿಸಿದ್ದು, ವಿಪ್ರನಿಗೆ ಅದು ಮೆಚ್ಚಾದ ಧರ್ಮ ಎಂಬ ಕಾರಣದಿಂದ. ವೈದಿಕರು ಬುದ್ಧನಿಗೆ ಒಂಬತ್ತನೆಯ ಅವತಾರದ ಸ್ಥಾನವನ್ನು ನೀಡಿದ್ದಾರೆ. ಕರ್ನಾಟಕದ ಪ್ರಾಚೀನ ಇತಿಹಾಸದಲ್ಲಿ ಜೈನರಿಗೂ ವೀರಶೈವರಿಗೂ ಇದ್ದ ವಿರಸ, ಒರಸೊರಸು, ತಿಕ್ಕಾಟ, ಘರ್ಷಣೆ, ಸುಪ್ರಸಿದ್ಧ. ಶತಕಕಾರ ನಾಗವರ್ಮನೇ ಇರಲಿ, ಉದಯಾದಿತ್ಯನೇ ಇರಲಿ, ಆತ ಜೈನ ಬೌದ್ಧ ಮತಗಳ ಪಕ್ಷಪಾತಿ ಎಂಬುದು ಸ್ಪಷ್ಟ.

ಕೃತಿಪ್ರಾರಂಭದಲ್ಲಿ ಶ್ರೀಲಕ್ಷ್ಮಿಯನ್ನು, ಮೋಕ್ಷಲಕ್ಷ್ಮಿಯನ್ನು ಬಯಸುವ ಪ್ರಾರ್ಥನಾ ಪದ್ಯ ವಿಷಯಪ್ರತಿಪಾದನೆಗೆ ಶ್ರೀಕಾರ ಹಾಕಿದೆ ಎನ್ನಬಹುದು. ಜೀವ–ಜಗತ್ತು–ಈಶ್ವರ ಇವುಗಳ ಓತಪ್ರೋತವಾದ ಸಂಬಂಧದ ಪರಾಮರ್ಶೆ ಕೃತಿಯ ಉದ್ದಕ್ಕೂ ಸಾರವತ್ತಾಗಿ ಸಾಗಿದೆ. ಪ್ರಾರಂಭದ ಕೆಲವು ಪದ್ಯಗಳಲ್ಲಿ ತೀವ್ರ ವೈರಾಗ್ಯಪ್ರಾಪ್ತಿಗಾಗಿ ಹಂಬಲಿಕೆ, ಈಶ್ವರ-ಕೃಪೆಗೆ ಬೇಡಿಕೆ, ಪ್ರಸ್ಫುಟವಾಗಿ ಪ್ರಕಾಶಗೊಂಡಿವೆ. 38ನೇ ಪದ್ಯದಲ್ಲಿ ಶಾಂಕರ ಅದ್ವೈತದ ಜಗನ್ಮಿಥ್ಯಾ ದೃಷ್ಟಿ ಸ್ಪಷ್ಟಗೋಚರವಾಗಿದೆ. ಇದರ ಮುಂದಿನ ಪದ್ಯದಲ್ಲಿಯೇ 'ಎನ್ನಂ ಮೋಹಿಸುತ್ತಿರ್ಪ ಮಾಯೆ'ಯ ಪ್ರಸ್ತಾಪವಿದೆ. ಪದ್ಯ 66ರಲ್ಲಿ ಕರ್ಮಕಾಂಡ ಜ್ಞಾನ-ಕಾಂಡಗಳ ಪ್ರಸ್ತಾವ ವೈದಿಕ ಅದ್ವೈತ ಪ್ರಕ್ರಿಯೆಗೇ ಸಂಬಂಧಪಟ್ಟದ್ದಾಗಿದೆ. ಪದ್ಯ 72ರಲ್ಲಿ ಸಗುಣಾರಾಧನೆಯ ವಿಚಾರವಿದೆ. ಇದರ ಮುಂದಿನ ಪದ್ಯಗಳಲ್ಲಿ ಯೋಗಸಾಧನೆಯಿಂದ ನಿರ್ಗುಣಬ್ರಹ್ಮಾನಂದಾನುಭವದ ಚಿತ್ರಣವಿದೆ. (ಅಷ್ಟಾಂಗಯೋಗದಲ್ಲಿ ಪ್ರೋಕ್ತವಾದ ಓಂಕಾರ, ಷಟ್‌ಚಕ್ರಗಳ ಪರೋಕ್ಷ ಪ್ರಸ್ತಾವವಿದೆಯೇ ಹೊರತು ವೀರಶೈವ ಸಿದ್ಧಾಂತದ ಷಟ್‌ಸ್ಥಲದ ಸುಳಿವೂ ತೋರದು ) ಪದ್ಯ 79ರಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ವಾಕ್ಯದ ವಿವರಣೆ ಬಂದಿದೆ. "ತ್ರೈಮೂರ್ತಿಯೊಂದರ್ಚನೋತ್ಸವಮಂ" ಪ್ರಶಂಸೆ ಮಾಡುವ ಕವಿ ಯಾವ ಮತಸಿದ್ಧಾಂತಕ್ಕೆ (ಪ. 81) ನಿಷ್ಠೆಯುಳ್ಳವನು ಎಂಬುದು ಸ್ವಯಂ ಸ್ಪಷ್ಟ. ಶ್ರುತಿವಾಕ್ಯವಲ್ಲ, ಅನುಭವವೇ ಪ್ರಮಾಣ ಎಂಬ ಶ್ರೀ ಶಂಕರರ ಉಪನಿಷದ್ಭಾಷ್ಯದ ದೃಷ್ಟಾಂತ ವಾಕ್ಯದ ಪ್ರಸ್ತಾವವೂ ಗಮನಾರ್ಹ.[1] (ಪ.88). ಶಿವನ ಅಷ್ಟಮೂರ್ತಿಪ್ರಶಂಸೆಯ ಸಂದರ್ಭದಲ್ಲಿ 'ಹವಿಸ್ಸು, ಯಜ್ಞ, ಯಜಮಾನ ಮುಂತಾದವೆಲ್ಲ ಪರಮಾತ್ಮ' ಎಂಬ ವೇದವಾಕ್ಯಪ್ರಮಾಣ (ಪದ್ಯ 93), ಮಿಗಿಲಾಗಿ "ನಿಮ್ಮನರಿದು ನಾನು ನೀನಾದೆ ಎಂಬ ಬುದ್ಧಿಯನ್ನು ಕೊಡು" ಎಂಬಲ್ಲಿ ಜೀವ-ಬ್ರಹ್ಮೈಕ್ಯದೃಷ್ಟಿ — ಈ ಎಲ್ಲ ವಿಚಾರವೂ ಕೃತಿಯ ಅದ್ವೈತಪ್ರವಣತೆಯನ್ನು ನಿಚ್ಚಳವಾಗಿ ಎತ್ತಿಹಿಡಿಯುತ್ತದೆ.

ಕೃತಿಯ ತತ್ತ್ವವಿಚಾರ ಯಾವ ನೆಲೆಯಲ್ಲಿ ನಿಂತಿದೆ ಎಂಬ ಮೇಲಿನ ವಿಚಾರ ವಿಮರ್ಶೆಯಲ್ಲಿ ಒಂದಕ್ಕಿಂತ ಇನ್ನೊಂದು ಮೇಲು ಅಥವಾ ಕೀಳು ಎಂದು ವಾದಿಸುವ ದೃಷ್ಟಿ ಖಂಡಿತ ಇಲ್ಲ ಎಂದು ಸ್ಪಷ್ಟಪಡಿಸಬಯಸುತ್ತೇನೆ. ಕೃತಿಕಾರನ ತಾತ್ತ್ವಿಕ ನಿಲುವನ್ನು ಸತ್ಯಾನ್ವೇಷಕ ಬುದ್ಧಿಯಿಂದ ಗುರುತಿಸುವ ಪ್ರಾಮಾಣಿಕ ಪ್ರಯತ್ನ ಸಂಪಾದಕನದು. ಗ್ರಂಥಸಂಪಾದನ ಶಾಸ್ತ್ರದ ಪ್ರಕ್ರಿಯೆಗೆ ಅನುಗುಣವಾಗಿ ಪಾಠದ ಸ್ಖಾಲಿತ್ಯಗಳನ್ನು ತಿದ್ದುವ ಪ್ರಯತ್ನ ಮಾಡಿದೆಯೇ ಹೊರತು, ಮತೀಯ ಪಕ್ಷಪಾತದಿಂದ ಪಾಠಪರಿಷ್ಕರಣ ಮಾಡುವ ಹವ್ಯಾಸಕ್ಕೆ ಹೋಗಿಲ್ಲ.

ಈ ಕೃತಿಯ ಪಾಠವನ್ನು ನನಗೆ ದೊರೆತ ಏಕೈಕ ಹಸ್ತಪ್ರತಿಯ ಆಧಾರದಿಂದ ಸಿದ್ಧಪಡಿಸಿದ್ದಾಗಿದೆ. ಈ ಹಸ್ತಪ್ರತಿ KB 734ನೆಯ ಕ್ರಮಸಂಖ್ಯೆಯ ಹಸ್ತಪ್ರತಿ; ಮೈಸೂರು

---

1 ಶ್ರೀ ಶಾಂಕರಭಾಷ್ಯದ ಮೂಲವಾಕ್ಯವನ್ನು ಬರೆದು ಕಳಿಸಿಕೊಟ್ಟು ಉಪಕರಿಸಿದವರು ವಿದ್ವಾನ್ ಶ್ರೀ ಎನ್. ರಂಗನಾಥಶರ್ಮ ಅವರು. "ನ ಚ ಪ್ರಮಾಣಾಂತರ ವಿರುದ್ಧಾರ್ಥ ವಿಷಯೇ ಶ್ರುತೇಃ ಪ್ರಾಮಾಣ್ಯಂ ಕಲ್ಪ್ಯತೇ, ಯಥಾ ಶೀತೋಽಗ್ನಿಃ ಕ್ಲೇದಯತೀತಿ".

ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರಕ್ಕೆ ಸೇರಿದ್ದು.[1] ಈ ಹಸ್ತಪ್ರತಿಯ ಒಂದು ಯಥಾಪ್ರತಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಸಂಗ್ರಹದಲ್ಲಿ ಇದೆ ಎಂದು ಸಂಶೋಧನ ವಿಭಾಗದ ಮುಖ್ಯಸ್ಥರಾದ ಶ್ರೀ ಎಸ್. ಶಿವಣ್ಣನವರು ನನಗೆ ತಿಳಿಸಿ, ಅವನ್ನು ದೊರಕಿಸಿಕೊಟ್ಟರು. ಚಂದ್ರ-ಚೂಡಾಮಣಿ ಶತಕವನ್ನು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸಲು ಅನುಮತಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಪ್ರೊ|| ಹು. ಕ. ಜಯದೇವ ಅವರೂ ಮೈಸೂರು ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ|| ಜಿ. ಶಂ. ಪರಮಶಿವಯ್ಯನವರೂ ನೀಡಿ ಉಪಕರಿಸಿರುತ್ತಾರೆ. ಈ ಮೂವರು ಮಹನೀಯರಿಗೂ ನಾವು ಕೃತಜ್ಞರಾಗಿದ್ದೇವೆ.

ಚಂದ್ರಚೂಡಾಮಣಿ ಶತಕವನ್ನು ಸಂಪಾದಿಸಿ ಪ್ರಕಟಿಸಬೇಕೆಂದಿದ್ದ ನನ್ನ ಬಹು-ವರ್ಷಗಳ ಹಿಂದಿನ ಕನಸು ಇಂದು ನನಸಾಗಿರುವುದು ನನಗೆ ಸಂತೃಪ್ತಿಯನ್ನುಂಟುಮಾಡಿದೆ. ಮಾನ್ಯ ಮಿತ್ರರಾದ ಪ್ರೊ|| ಸಿ. ಮಹಾದೇವಪ್ಪನವರು ತಮ್ಮ ಬಳಿ ಚಂದ್ರಚೂಡಾಮಣಿ ಶತಕದ ಪ್ರತಿಗಳು ಇವೆ ಎಂಬ ವಿಷಯವನ್ನು ಹಿಂದೆಯೇ ತಿಳಿಸಿದ್ದರು. ಅವರು ಕೃತಿಯನ್ನು ಇನ್ನೂ ಪ್ರಕಟಿಸಿರಲಿಲ್ಲವಾದ್ದರಿಂದ, ಅದನ್ನು ಪ್ರಕಟಿಸುವ ನಿರ್ಧಾರವನ್ನು ಪ್ರತಿಷ್ಠಾನ ಕೈಗೊಂಡ ಮೇಲೆ ತಮ್ಮ ಬಳಿ ಇರುವ ಪ್ರತಿಗಳನ್ನು ಎರವಲು ಕೊಡಬೇಕೆಂದು ಪ್ರಾರ್ಥಿಸಿ ಅವರಿಗೆ ಪತ್ರ ಬರೆದೆನು; ಅವರನ್ನು ಭೇಟಿಯಾದಾಗ ಕೇಳಿಕೊಂಡೆನು. ತಾವೇ ಪ್ರಕಟಿಸಬೇಕೆಂದಿರುವುದಾಗಿ ತಿಳಿಸಿದರಷ್ಟೆ. ಪ್ರತ್ಯಂತರಗಳು ದೊರೆತಿದ್ದರೆ ಪಾಠಪರಿಷ್ಕರಣಕ್ಕೆ ಹೆಚ್ಚಿನ ನೆರವು ದೊರೆಯುತ್ತಿತ್ತು; ಊಹಾತ್ಮಕ ಪರಿಷ್ಕರಣ ಬಹುಶಃ ಈಗ ಇರುವಷ್ಟು ಇರುತ್ತಿರಲಿಲ್ಲ. "ಸಿದ್ಧಗಂಗಾ ಶ್ರೀ" ಸಂಪುಟದಲ್ಲಿ ಅವರು ಪ್ರಕಟಿಸುವ ಲೇಖನದಲ್ಲಿ ಶತಕದ ಸು. 23 ಪದ್ಯಗಳು ಉದಾಹೃತವಾಗಿವೆ. ಈ ಪದ್ಯಗಳಿಗೆ a, b, c ಎಂಬ ಮೂರು ತಾಡವೋಲೆ ಹಸ್ತಪ್ರತಿಗಳಿಂದ ಪಾಠಾಂತರಗಳನ್ನು ಕೊಟ್ಟಿದ್ದಾರೆ. ಉದ್ಧೃತ ಪದ್ಯಗಳು ಅವರು ಬಳಸಿಕೊಂಡಿರುವ ಹಸ್ತಪ್ರತಿಯಲ್ಲಿಯವು. ಈ ನಾಲ್ಕು ಹಸ್ತಪ್ರತಿಗಳೂ ಇಲ್ಲಿ ಮ, ಮa, ಮb, ಮc ಎಂಬ ಸಂಕೇತಗಳಿಂದ ಸೂಚಿತವಾಗಿವೆ. (ಅಧ್ಯಯನ ಸಂಸ್ಥೆಯ ಪಾಠದ ಸಂಕೇತ 'ಅ'.) ಮಹಾದೇವಪ್ಪನವರ ವಿಚಾರಪ್ರಚೋದಕ ಲೇಖನಕ್ಕೆ ನಾನು ಬಹು ವಿಧಗಳಲ್ಲಿ ಋಣಿಯಾಗಿದ್ದೇನೆ.

ಹಳಗನ್ನಡದಲ್ಲಿ ಪ್ರವೇಶವಿಲ್ಲದ ಓದುಗರ ಅನುಕೂಲಕ್ಕಾಗಿ ಪ್ರತಿಪದ್ಯಕ್ಕೂ ಸರಳವಾದ ಗದ್ಯಾನುವಾದವನ್ನು ಕೊಟ್ಟಿದೆ. ಕಠಿನ ಪದಗಳ ಅರ್ಥವನ್ನು ಕೊಟ್ಟಿದೆ. ಇವುಗಳ

---

1 ಮೂಲ ಹಸ್ತಪ್ರತಿಯನ್ನು 12-6-1977 ರಂದು ಪ್ರತಿ ಮಾಡಿ ಮುಗಿಸಿದವರು ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಸಂಶೋಧನ ಸಹಾಯಕರಾದ ಶ್ರೀ ಕೆ. ಆರ್. ಶೇಷಗಿರಿ ರಾವರು, ಹೋಲಿಸಿ ನೋಡಿದವರು ಅವರು ಮತ್ತು ಸಂಪಾದನ ವಿಭಾಗದ ಉಪ ನಿರ್ದೇಶಕರಾದ ಶ್ರೀ ಎಸ್. ಬಸವಾರಾಧ್ಯ ಅವರು.

ಸಹಾಯದಿಂದ ಮೂಲಪದ್ಯಗಳ ಅರ್ಥಮಾಡಿಕೊಳ್ಳಲು ಸ್ವಲ್ಪವಾದರೂ ಸಹಾಯವಾಗ ಬಹುದು ಎಂದು ನಂಬಿದ್ದೇನೆ.

ನಿರ್ದಿಷ್ಟ ಅವಧಿಯಲ್ಲಿ ಪುಸ್ತಕವನ್ನು ಹೊರತರಬೇಕಾಗಿ ಬಂದದ್ದರಿಂದ ಪಾಠ-ಪರಿಷ್ಕರಣವನ್ನೂ ಪೀಠಿಕೆಯ ಬರಹವನ್ನೂ ಅಚ್ಚಿನ ಕರಡು ತಿದ್ದಾಣಿಕೆಯನ್ನೂ ತರಾತುರಿ ಯಲ್ಲಿ ಮಾಡಿದ್ದಾಗಿದೆ. ಒಂದಕ್ಕಿಂತ ಹೆಚ್ಚು ಸಲ ಅಚ್ಚಿನ ಕರಡನ್ನು ಪರಿಶೀಲಿಸುವುದ ಕ್ಕಾಗಿಯಾಗಲಿ ಈಗಿರುವುದಕ್ಕಿಂತ ಹೆಚ್ಚು ವಿಮರ್ಶಾತ್ಮಕವಾಗಿ, ವಿಸ್ತಾರವಾಗಿ, ಪೀಠಿಕೆ ಬರೆಯುವುದಕ್ಕಾಗಲಿ ವ್ಯವಧಾನವಾಗಲಿಲ್ಲ. ಅನವಧಾನದಿಂದ ಮುದ್ರಣದೋಷಗಳೂ ಇತರ ದೋಷಗಳೂ ಇದ್ದಾವು. ಪ್ರಾಜ್ಞರು ಅವನ್ನು ತೋರಿಸಿಕೊಟ್ಟಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳಲಾಗುವುದು.

ಬಹಳ ಅತ್ಯಲ್ಪಕಾಲದಲ್ಲಿ ಶ್ರೀ ಲಕ್ಷ್ಮಿ ಪ್ರಿಂಟರ್ಸ್ ಅವರು ಈ ಪುಸ್ತಕವನ್ನು ಮುತವರ್ಜಿ ವಹಿಸಿ ಅಚ್ಚುಕಟ್ಟಾಗಿ ಮುದ್ರಣಮಾಡಿಕೊಟ್ಟಿದ್ದಾರೆ. ಇವರಿಗೆ ಪ್ರತಿಷ್ಠಾನದ ಪರವಾಗಿ ನನ್ನ ಕೃತಜ್ಞತೆಯ ವಂದನೆಗಳು.

25-1-1989
ಬೆಂಗಳೂರು-19

ಎಂ. ವಿ. ಸೀತಾರಾಮಯ್ಯ

ರೀತಿ ತಾನೆ ಏಕೆ ಉಳಿದಿರುವುದು? ಹೇ ಚಂದ್ರಮೌಳೀ, (ಆ ಪ್ರಯತ್ನಶೀಲ ವನ್ನು) ನೀಡು.

ಅನ್ನೆವರಂ–ಅಲ್ಲಿಯವರೆಗೆ. ತದೀಯ–ಆ. ದೇಹಧರ್ಮ–ದೇಹಧಾರಣಕ್ಕೆ ಅಗತ್ಯ ವಾದ ಅನೈಚ್ಛಿಕ ಕ್ರಿಯೆಗಳು. ಮಾಣದೆ–ಬಿಡದೆ. ಅಪ್ತಾತ್ಮ–ಪರಮಾತ್ಮ, ಜೀವಾತ್ಮಕ್ಕೆ ಆಪ್ತನಾದವನು. ಈ–ನೀಡು, ಕೊಡು.

ತನುವಾನೆಂದೊಡೆ ತಚ್ಛರೀರಕೃತಕರ್ಮದ್ವಂದ್ವಮೊಂದಿರ್ಕುಮಾ-
ತನುವಾನಲ್ಲೆನಲುಂ ತದೀಯ ಸುಖದುಃಖಂ[1][ಮು][1]ಟ್ಟಮೆಂತಿರ್ದೊಡಂ-
ತಿನಲೇನಕ್ಕುಮೆ ಪಾವು ಗಾರುಡಿಗನಂತಾನೆಂತು ಸುತ್ತಿರ್ದೊಡಂ
ಮನದೊಳ್ ನೀನಿರೆ ಮುಟ್ಟದಾ ತನು[2][ಗು][2]ಣಂ ಶ್ರೀ ಚಂದ್ರಚೂಡಾಮಣೀ ೧೭

೧೭ ಶರೀರವೆ ನಾನು ಎಂದು ಭಾವಿಸಿದರೆ ಆ ಶರೀರದ ಮೂಲಕ ಮಾಡಿದ ಪುಣ್ಯಕರ್ಮ ಪಾಪಕರ್ಮ ಎಂಬೆರಡು ಕರ್ಮ ಇದ್ದೇ ಇರುತ್ತವೆ. ಆ ಶರೀರ ಸಂಬಂಧವಾದ ಸುಖದುಃಖಗಳು (ಆತ್ಮನಾದ) ನನ್ನನ್ನು ಮುಟ್ಟಲಾರವು. ಹಾವು (ಗರುಡಮಂತ್ರವನ್ನು ಬಲ್ಲ) ಹಾವಾಡಿಗನನ್ನು ಹೇಗೆ ಹೇಗೆ ಸುತ್ತಿಕೊಂಡಿದ್ದರೂ ಅವನನ್ನು ಕಚ್ಚಿ ಸಾಯಿಸಬಲ್ಲದೆ? (ಎಂದಿಗೂ ಇಲ್ಲ). ಅದೇ ರೀತಿ, ನನ್ನ ಮನಸ್ಸಿನಲ್ಲಿ ನೀನು ನೆಲಸಿದ್ದರೆ ತನುಗುಣ (ದೇಹಧರ್ಮ) ನನ್ನನ್ನು ಮುಟ್ಟಲಾರದು. (ತನುಗುಣವನ್ನು ಹಾವಿಗೂ ಶಿವನನ್ನು ಗಾರುಡಿಗನಿಗೂ ಹೋಲಿಸಿದೆ). (ಆಧ್ಯಾತ್ಮಿಕ ಸಾಧನೆಗೂ ದೇವರ ಕೃಪೆ ಅಗತ್ಯ ಎಂದು ತಾತ್ಪರ್ಯ).

ತಿನ್ನು (ತಿನ್)–ಕಡಿ, ಕಚ್ಚು (ಕಚ್ಚಿ ಸಾಯಿಸು). ಗಾರುಡಿಗ–ಗರುಡಮಂತ್ರವನ್ನು ಬಲ್ಲ ಹಾವಾಡಿಗ.

ಒಡಲಿಂತೆಂದಱಿದೀಶರೀರದಳಿಪಂ ಬಿಟ್ಟಲ್ಲಿ ಪೊಕ್ಕಿರ್ದು ಕೂ-
ಗಿಡಿಸುತ್ತಿರ್ಪಖಿಳೇಂದ್ರಿಯಪ್ರಕರದಿಚ್ಛಾವೃತ್ತಿಯೊಳ್ ಸಲ್ಲದೀ-
ಯೊಡಲುಂ ಜೀವನುಮಾತ್ಮನುಂ ಸಕಳಮುಂ ನೀನೆಂದತಿ ಪ್ರೀತಿಯಿಂ
ಮೃಡ ನಿಮ್ಮಂ ಸಲೆ ನಂಬುಗೆನ್ನಯ ಮನಂ ಶ್ರೀ ಚಂದ್ರಚೂಡಾಮಣೀ ೧೮

೧೮ ಶರೀರವೇ ಹೀಗೆ ಎಂದು ತಿಳಿದು, ಶರೀರದ ಮೇಲಿನ ಆಸೆಯನ್ನು (ವ್ಯಾಮೋಹವನ್ನು) ಬಿಟ್ಟು, ಶರೀರದಲ್ಲಿ ಪ್ರವೇಶಿಸಿ (ಸುಖಭೋಗಕ್ಕಾಗಿ) ಕೂಗಿ ಕರೆಯುವಂತೆ ಮಾಡುವ ಸಮಸ್ತ ಇಂದ್ರಿಯಸಮೂಹದ ಇಚ್ಛಾಪ್ರವೃತ್ತಿಯಲ್ಲಿ ಸೇರಿಕೊಳ್ಳದೆ (ಇಚ್ಛೆಯ ಲಹರಿಯಂತೆ ನಡೆದುಕೊಳ್ಳದೆ), ನನ್ನ ಶರೀರ ಪ್ರಾಣ ಆತ್ಮ ಇವೆಲ್ಲವೂ ನೀನೇ ಎಂದು ನನ್ನ ಮನಸ್ಸು ಪೂರ್ಣಪ್ರೇಮದಿಂದ ನಿಮ್ಮನ್ನು ನಂಬಲಿ, ಮೃಡನೇ.

ಅಳಿಪು–ಆಸೆ. ಪ್ರಕರ–ಸಮೂಹ.

1 ಮ 2 ಗ

ಕಿವಿಯಿಂ ತ್ವಕ್ಚಯದಿಂ ವಿಲೋಚನದಿನಂತಾ ಜಿಹ್ವೆಯಿಂ ಘ್ರಾಣದಿಂ
ಶ್ರವಣ ಸ್ಪರ್ಶನ ಚಾರು ರೂಪರಸಗಂಧಾನೀಕದಿಂ ಕೇಳ್ವ ಮು-
ಟ್ಟುವ ಕಣ್ಸೋಲುವ ಸೋಲ್ತು ಕೂರ್ತು ಸವಿವಾಘ್ರಾಯಿಪ್ಪ ದುರ್ಮೋಹಮಂ-
ಬಿವನೆಲ್ಲಂ ಬಿಸುಟಿರ್ಕೆ ನಿರ್ಮ್ಮೆಳೆ ಮನಂ ಶ್ರೀ ಚಂದ್ರಚೂಡಾಮಣೀ ೧೯

೧೯ ಕಿವಿಯಿಂದ ಚರ್ಮದಿಂದ ಕಣ್ಣಿನಿಂದ ನಾಲಗೆಯಿಂದ ಮೂಗಿನಿಂದ, ಶ್ರವಣ ಸ್ಪರ್ಶನ ರೂಪ ರಸ ಗಂಧ ಅಂದರೆ ಕೇಳುವ ಮುಟ್ಟುವ ಕಣ್ಣು ಸೋಲುವ ಹಾಗೆ ಸೋತು ಒಲಿದು ಸವಿಯುವ (ರುಚಿನೋಡುವ) ವಾಸನೆ ನೋಡುವ—ಈ ಎಲ್ಲ ಪಂಚೇಂದ್ರಿಯ ವ್ಯಾಪಾರಗಳ ಕೆಟ್ಟ ವ್ಯಾಮೋಹವನ್ನು ಬೀಸಾಡಿ ನಿರ್ಮ್ಮಲ್ಲಿಯೇ ನನ್ನ ಮನಸ್ಸು ನೆಲಸಿರಲಿ, ಓ ಚಂದ್ರಚೂಡಾಮಣೀ.

ತ್ವಕ್ (ತ್ವಚೆ)–ಚರ್ಮ. ವಿಲೋಚನ–ಕಣ್ಣು. ಜಿಹ್ವೆ–ನಾಲಗೆ. ಘ್ರಾಣ–ಮೂಗು ಹಾಗೂ ವಾಸನೆ ನೋಡುವುದು, ಮೂಸುವಿಕೆ. ಶ್ರವಣ–ಕಿವಿಯಿಂದ ಕೇಳುವುದು. ಸ್ಪರ್ಶನ–ಸೋಕುವುದು, ಮುಟ್ಟುವಿಕೆ. ಚಾರು–ಮನೋಹರವಾದ. ಅನೀಕ–ಸಮೂಹ. ಕೂರ್ತು–ಪ್ರೇಮಿಸಿ, ಒಲಿದು (ಕೂರ್ ಧಾತು). ಆಘ್ರಾಯಿಪ್ಪ–ಆಘ್ರಾಣಿಸುವ, ಮೂಸಿ ನೋಡುವ. ದುರ್ಮೋಹ–ಕೆಟ್ಟ ಆಕರ್ಷಣೆ, ಸೆಳೆತ; ಮೈಮರೆಯುವಿಕೆ.

ಕಿವಿಯೊಳ್ಕೇಳ್ದವನೆಲ್ಲಮಂ ಪದಪಿನಿಂದಂ ಕಣ್ಗಳೊಳ್ ಕಾಣ್ಬವೆ-
ಲ್ಲವನಂತಃಕರಣಂಗಳಿಂಪಜಿಪ ನಾನಾ ವಸ್ತುಸಂದೋಹಮೆ-
ಲ್ಲವನಾಂ ನೀನೆನುತೆಂ[1][ಒ][1] ಭಾವನ[2][ಯಿ][2]ನಾತ್ಮಾರಾಮನಾಗಿರ್ಪ ತ-
ತ್ವವಿಚಾರಂ ಸಲೆ ಕೂಡುಗೆನ್ನ ಮನದೊಳ್ ಶ್ರೀ ಚಂದ್ರಚೂಡಾಮಣೀ ೨೦

೨೦ ಕಿವಿಯಿಂದ ಕೇಳುವ ಎಲ್ಲ ವಿಷಯಗಳೂ, ಪ್ರೀತಿಯಿಂದ ಕಣ್ಣುಗಳ ಮೂಲಕ ಕಾಣುವುದೇನುಂಟೋ ಅವೆಲ್ಲವೂ, ಮನಸ್ಸಿನಿಂದ ಗ್ರಹಿಸುವ ಎಲ್ಲ ವಿಷಯಗಳೂ ನೀನೆ ಆಗಿದ್ದೀಯೆ, ನಿನ್ನ ಹೊರತು ಯಾವುದೂ ಇಲ್ಲ ಎಂದೆಂಬ ಭಾವನೆಯಿಂದ ಆತ್ಮನಲ್ಲಿಯೇ ವಿಶ್ರಾಂತನಾಗಿ ಸುಖಪಡುತ್ತಿರುವಂಥ ತತ್ತ್ವವಿಚಾರವು ನನ್ನ ಮನಸ್ಸಿನಲ್ಲಿ ಚೆನ್ನಾಗಿ ಕೂಡಿಕೊಂಡಿರಲಿ.

ಪದ[ದ]ಪು–ಪ್ರೀತಿ; ಸಂತೋಷ. ಅಂತಃಕರಣ – ಮನಸ್ಸು. ಸಂದೋಹ – ಗುಂಪು; ಸಮೂಹ. ಆತ್ಮಾರಾಮ–ಆತ್ಮನಲ್ಲಿ ವಿಶ್ರಮಿಸಿ ಆನಂದಪಡುವಿಕೆ.

ಶಯು ಕರ್ಣಾಂತರದಿಂ ಗಜಂ [3]ತ್ವಚದಿನುದ್ಭ್ರಾಮ್ಯತ್ಪತಂಗಂ ನಿಜಾ-
ಕ್ಷಿಯುಲಂಪಿಂ ಶಫರಾಳಿ ನಾಲಗೆಯಿನುನ್ಮತ್ತಾಳಿ ಮೂಗಿಂದಮಿಂ-
ದಿಯಮೊಂದೊಂದಱಿನೊಂದಿ ಕೆಟ್ಟವೆನೆ ತತ್ಪಂಚೇಂದ್ರಿಯಕ್ಕುದ್ಭವಾ-
ಲಯಮಾದೆನ್ನೆನಗೆಲ್ಲಿ ತದ್ವಿಷಯದಿಂ ಶ್ರೀ ಚಂದ್ರಚೂಡಾಮಣೀ ೨೧

1 ತು 2 ಯು 3 ಸ್ಪರ್ಶನದಿಂ (ಅ), ಸ್ಪೀಪಾ (ಮ).

೨೧ ಹೆಬ್ಬಾವು ತನ್ನ ಒಳಗಿವಿಯಿಂದ, ಆನೆ ತನ್ನ ಚರ್ಮದಿಂದ, ಸುತ್ತು ತಿರುಗುವ ದೀಪದ ಹುಳು ತನ್ನ ಕಣ್ಣಿಂದ, ಶಫರ ಎಂಬ ಮೀನು ತನ್ನ ನಾಲಗೆಯಿಂದ, ಸೊಕ್ಕಿದ ತುಂಬಿ ತನ್ನ ಮೂಗಿಂದ,—ಹೀಗೆ ಒಂದೊಂದು ಪ್ರಾಣಿಯೂ ತನ್ನ ಒಂದೊಂದು ಇಂದ್ರಿಯದಿಂದ ಕೆಡುತ್ತದೆ (ಹಾನಿ ಹೊಂದುತ್ತದೆ). (ಒಂದು ಇಂದ್ರಿಯದ ಉಪಯೋಗದಿಂದಲೇ ಕೆಡಬೇಕಾದರೆ ಐದು ಇಂದ್ರಿಯಗಳನ್ನು ಹೊಂದಿರುವ ಮನುಷ್ಯಪ್ರಾಣಿಯ ಗತಿ ಏನಾಗುವುದೆಂದು ಬಿಡಿಸಿ ಹೇಳಲೇಬೇಕಾಗಿಲ್ಲ). ಆ ಪಂಚೇಂದ್ರಿಯಗಳಿಗೆ ಹುಟ್ಟುಮನೆಯಾದ ನನ್ನನ್ನು ಆ ಇಂದ್ರಿಯಗಳ ಸಂಬಂಧದಿಂದ ಬೇರ್ಪಡಿಸು, ಶ್ರೀ ಚಂದ್ರಚೂಡಾಮಣೀ.

ಶಯು–ಹೆಬ್ಬಾವು. ತ್ವಚ–ಚರ್ಮ. ಭ್ರಾಮ್ಯತ್–ಸುತ್ತು ತಿರುಗುವ, ಅಲೆಯುವ. ಪತಂಗ–ದೀಪದ ಹುಳು. ಅಕ್ಷಿ–ಕಣ್ಣು. ಶಫರ–ಒಂದು ಜಾತಿಯ ಮೀನು. ಆಳಿ–ಸಮೂಹ, ಗುಂಪು. ಉನ್ಮತ್ತಾಳಿ (ಉನ್ಮತ್ತ + ಆಳಿ)–ಸೊಕ್ಕಿದ ತುಂಬಿ. ಉದ್ಭವಾಲಯ–ಹುಟ್ಟುವ ಮನೆ. ಅಗಲ್ಚು–ಅಗಲಿಸು; ಬೇರ್ಪಡಿಸು.

[1][ಎರೆ][1]ಯಂ ನುಂಗಿ ಪಯೋಧಿಯೊಳ್ ಶಫರಜಾಲಂ ಗಾಳದೊಳ್ ಬೀಳ್ವವೊ-
[ಲ್ ಪು]ರದೊಳ್ಮೇಳಿತ [2][ಮಾ][2]ಮಿಷಸ್ತ್ರಕರಸೇವಾಸಕ್ತಿಯಿಂ ಜನ್ಮಸಾ-
ಗರದೊಳ್ ಬೀಳ್ವುದು ಪುಣ್ಯಪಾಪವಶದಿಂದಂ ಜೀವನನ್ಮಾನಸಾ-
ಗರದಿಂದಂ ಪೊ[3][ಱ][3]ಗಿಕ್ಕು ನೀಂ ಕರುಣದಿಂ ಶ್ರೀ ಚಂದ್ರಚೂಡಾಮಣೀ ೨೨

೨೨ ಸಮುದ್ರದಲ್ಲಿ ಮೀನಿನ ಗುಂಪು ಎರೆಹುಳುವನ್ನು ನುಂಗಿ ಗಾಳದಲ್ಲಿ ಬೀಳುವ ಹಾಗೆ ದೇಹಕ್ಕೆ ಸಂಬದ್ಧವಾದ ಭೋಗವಸ್ತುಗಳನ್ನು ಸೇವಿಸಬೇಕೆಂಬ ಆಸಕ್ತಿಯಿಂದ ಜನ್ಮಸಾಗರದಲ್ಲಿ ಬೀಳುವುದು ಪುಣ್ಯಪಾಪಗಳಿಗೆ ಸೇರಿದ್ದು. ಚಂದ್ರಚೂಡಾಮಣಿಯೇ, ಜೀವನನ್ನು (ನಾನು ನನ್ನದು) ಎಂಬ ಅಭಿಮಾನದ ಸಾಗರದಿಂದ (ಮಾನ + ಸಾಗರ) (ಅಥವಾ ಮನಸ್ಸಿನ ಸೆಳೆಯಿಂದ : ಮಾನಸ + ಆಗರ) ನನ್ನನ್ನು ಹೊರಗಿಕ್ಕು. (ಮನುಷ್ಯನ ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣ ಎಂಬ ಹೇಳಿಕೆಯೂ ಉಂಟು).

ಎರೆ–ಎರೆಹುಳು; ಮಣ್ಣಿನ ಹುಳು.

ಮನದೊಳ್ ನಿಮ್ಮನೆ ಕೂಡಿಕೊಂಡಿರದಗಲ್ಚುತ್ತಿರ್ಪಪೆತ್ತಾಸುಮೊಂ-
ದಿನಿಸಾನುಂ ಮರೆದಾಗಳಕ್ಷಣದೊಳೆನ್ನಂ ಸುತ್ತಿ ತಮ್ಮತ್ತಲೊ-
ಯ್ದನಿತಾನುಂ ಕೊಱಚಾಡಿ ಕಾಡಿದಪವಾಂ ಬಲ್ಲೆಂ ಮದೀಯೇಂದ್ರಿಯ-
ಕ್ಕೆನಿತಂ ನಿಮ್ಮನೆ ಚಿತ್ತದೊಳ್ನಿಱಿಸುವೆಂ ಶ್ರೀ ಚಂದ್ರಚೂಡಾಮಣೀ ೨೩

---

1 ಪೆರೆ 2 ಯಾ 3 ನ

೨೩ ಮನಸ್ಸಿನಲ್ಲಿ ನಿಮ್ಮನ್ನೆ ಕೂಡಿಕೊಂಡಿರದ ಹಾಗೆ ಇಂದ್ರಿಯಗಳು ನನ್ನನ್ನು ನಿಮ್ಮಿಂದ ಬೇರ್ಪಡಿಸುತ್ತಿವೆ. ಯಾವುದೇ ಕಾರಣದಿಂದ ಸ್ವಲ್ಪಮಾತ್ರವೇ ಆದರೂ ಎಚ್ಚರತಪ್ಪಿದ್ದಾಗ ಆ ಕ್ಷಣವೇ ನನ್ನನ್ನು ಅವು ಸುತ್ತುಗಟ್ಟಿ ತಮ್ಮ ಕಡೆಗೆ ಸೆಳೆಯುವುವು; ಪೀಡಿಸಿ ಕಾಡುವುವು, ಇದನ್ನು ನಾನು ಬಲ್ಲೆ. ಎಲೈ ಚಂದ್ರಚೂಡಾಮಣೀ, ಆ ಇಂದ್ರಿಯಗಳ ಕಾಟಕ್ಕೆ ಎಡೆಗೊಡದೆ (ಇಂದ್ರಿಯ ನಿಗ್ರಹಮಾಡಿ) ನನ್ನ ಚಿತ್ತದಲ್ಲಿ ನಿಮ್ಮನ್ನೆ ನೆಲೆಗೊಳಿಸುತ್ತೇನೆ.

ಕೊಜಚಾಡು–ಕಾಡು, ಪೀಡಿಸು. ಮದೀಯ–ನನ್ನ. ನಿಜಿಸು–ಸ್ಥಾಪಿಸು, ನೆಲೆಗೊಳಿಸು.

ಸಲೆ ತನ್ನಿಚ್ಛೆಗೆ ಕೊಂಡುಪೋದಪುದು ಸಂಸಾರಾಲ್ಪಸಂಕಲ್ಪಸೌ-
ಖ್ಯಲವಾಭಾಸದಲಂಪುದೋರೆ ವಿಷಯಂಗಳ್ ಬಲ್ಲೆ ನಾಂ ಚಿತ್ತದಿಂ
ಖಲರಾರಿಂದೊಳಸಾರ್ದು[1] + [2][ಛಿ][2]ದ್ರಿಪುದನಂ[3][ತುಂ][3]ನಚ್ಚಿ ನಂಬಿರ್ದೆ ನಿ-
ಶ್ಚಲದಿಂ ನಿಮ್ಮನೆ ಬಲ್ಲಿತಾಗಿ ಪಿಡಿದೆಂ ಶ್ರೀ ಚಂದ್ರಚೂಡಾಮಣೀ ೨೪

೨೪ ಕೇವಲ ಅತ್ಯಲ್ಪವಾದ ಇಚ್ಛಾಮಾತ್ರದಿಂದ ಸಂಸಾರದಲ್ಲಿ ದೊರೆಯಬಹುದಾದ ಸುಖದ ಲವಲೇಶವೂ ಅಲ್ಲ, ಅದರ ಆಭಾಸದ ಒಂದು ಸಂತಸವನ್ನು ತೋರಲೆಂದು ಇಂದ್ರಿಯಗಳು ತಮ್ಮ ಇಚ್ಛಾನುಸಾರ (ಜೀವನನ್ನು) ಸಂಪೂರ್ಣವಾಗಿ (ಸ್ವಾಧೀನಪಡಿಸಿಕೊಂಡು) ಸೆಳೆದುಕೊಂಡು ಹೋಗುವವು. ಇದನ್ನು ನಾನು ಬಲ್ಲೆ; ಮನಸ್ಸಿಗಿಂತ ನೀಚರಾದವರು ಬೇರೆ ಯಾರು? ಅದು ಒಳಹೊಕ್ಕು (ನನ್ನ ವ್ಯಕ್ತಿತ್ವವನ್ನು) ಚೂರು ಚೂರು ಮಾಡುವಂಥದು ಎಂದು ತಿಳಿದೂ ಅದನ್ನು ನಚ್ಚಿ ನಂಬಿದ್ದೆನು. ಈಗ ನಾನು ನಿಮ್ಮನ್ನೆ ಬಲವಾಗಿ ಅಚಲವಾಗಿ ಹಿಡಿದುಕೊಂಡಿದ್ದೇನೆ, ಓ ಚಂದ್ರಚೂಡಾಮಣೀ.

ಸಲೆ–ಚೆನ್ನಾಗಿ. ಲವ–ತುಸ. ಅಲಂಪು–ಸಂತೋಷ; ಸೊಗಸು. **ವಿಷಯ**–ಇಂದ್ರಿಯ. ಖಲ (ಳ)–ನೀಚ; ದುಷ್ಟ.

ಕರುಣಾಂತಃಕರಣಂಗಳಿಂದಜಿವ ಚಿತ್ತಾಸಕ್ತಿ ತಾಂ ಪುಣ್ಯ ಪಾ-
ಪರತವ್ಯಾಪ್ತಿಗೆ ಪುಣ್ಯಪಾಪಸುಖದುಃಖಕ್ಕಾಸ್ಪದಂ ಯೋಗತ-
ತ್ಪರನಾಗಿರ್ದಪವರ್ಗದೊಳ್ ನೆಜಿವುದಂ ತಾಂ ಬೇಗದಿಂ ಮನ್ಮನಂ
ಹರ ನಿಮ್ಮಿಂ ಸಲೆ ನಂಬುಗೆನ್ನಯ ಮನಂ ಶ್ರೀ ಚಂದ್ರಚೂಡಾಮಣೀ ೨೫

---

1 + ಪೊಕ್ಕು (ಅಧಿಕಾಕ್ಷರಗಳು). 2 ಚಿ 3 ತು

೨೫ ಕರುಣೆಯಿಂದಲೂ ಅಂತಃಕರಣಪೂರ್ವಕವಾಗಿಯೂ ಅರಿಯುವ ಮನೋವ್ಯಾಪಾರಗಳು ಪುಣ್ಯಪಾಪಕಾರ್ಯಗಳ ವ್ಯಾಪ್ತಿಗೆ ಒಳಪಡುತ್ತವೆ, ಆ ಕಾರ್ಯಗಳಲ್ಲಿಯೇ ನಿರತವಾಗಿರುತ್ತವೆ; ಆದ್ದರಿಂದ, ಆ ಪುಣ್ಯಪಾಪಕಾರ್ಯಗಳ ಪರಿಣಾಮವಾಗಿ ಇಹಪರ ಸುಖದುಃಖಗಳನ್ನೂ ಅನುಭವಿಸಬೇಕಾಗುತ್ತದೆ. ಹೀಗಿರುತ್ತ, ನನ್ನ ಮನಸ್ಸು ಯೋಗದಲ್ಲಿಯೆ ಆಸಕ್ತವಾಗಿದ್ದು ಬೇಗನೆ ಮೋಕ್ಷಕ್ಕೆ ಸಲ್ಲುವುದನ್ನು, ಮತ್ತು ನಿಮ್ಮನ್ನು, ಚೆನ್ನಾಗಿ ನಂಬಲಿ.

ಅಂತಃಕರಣ–ಮನಸ್ಸು. ಅಪವರ್ಗ–ಮೋಕ್ಷ.

[1][ವ್ಯ][1]ಸನಾಪೇಕ್ಷಿತನಪ್ಪ ಬುದ್ಧಿ ವಿಷಯಾಕ್ತ್ಯಾಸಕ್ತನಪ್ಪೊಂದು ಬು-
ದ್ಧಿ ಸಮಸ್ತೇಂದ್ರಿಯದಿಚ್ಛೆಯಂ ಸಲಿಪೆನೆಂಬೀ ಬುದ್ಧಿ [2][ಪೋಗಾ][2]ತ್ಮತ-
[3][ತ್ತ್ವಸಮಾಪನ್ನ][3]ಪಯಃಪಯೋಧಿಯೊಳಗೋಲಾಡುತ್ತಿರ್ಪೊಂದು ಬು-
ದ್ಧಿ ಸಮಂತಂತೆನಗಾಗಳುಂ ಪಟ್ಟಿಯದೀ ಶ್ರೀ ಚಂದ್ರಚೂಡಾಮಣೀ ೨೬

೨೬ ಕೆಟ್ಟ ಚಟಗಳನ್ನು ಬಯಸುವ ಬುದ್ಧಿ, ಇಂದ್ರಿಯಸುಖದಲ್ಲಿ ಆಸಕ್ತಿ ಹೊಂದುವ ಬುದ್ಧಿ, ಎಲ್ಲಾ ಪಂಚೇಂದ್ರಿಯಗಳ ಇಚ್ಛೆಯನ್ನು ನೆರವೇರಿಸುತ್ತೇನೆ ಎಂಬ ಬುದ್ಧಿ, ಇವು ಹೋಗಿ; ಆತ್ಮತತ್ತ್ವವನ್ನು ಹೊಂದಿದ ಕ್ಷೀರಸಮುದ್ರದಲ್ಲಿ ಓಲಾಡುತ್ತಲಿರುವ ಒಂದು ಬುದ್ಧಿಯನ್ನು ನನಗೆ ಯಾವಾಗಲೂ ಇರುವಂತೆ ನನ್ನನ್ನು ನಿಂದಿಸದೆ (ಅಥವಾ ತುಚ್ಛವಾಗಿ ಕಂಡು ದೂರಕ್ಕಟ್ಟದೆ) ಕರುಣಿಸು, ಶ್ರೀ ಚಂದ್ರಚೂಡಾಮಣೀ.

ವ್ಯಸನ–ಕೆಟ್ಟ ಚಟ. ವಿಷಯಾಸಕ್ತಿ–ಇಂದ್ರಿಯಸುಖದಲ್ಲಿ ಒಲವು. ಆತ್ಮತತ್ತ್ವ–ದೇಹ ನಾನಲ್ಲ, ನಾನು ಪರಮಾತ್ಮನ ಅಂಶವೇ ಆದ ಪ್ರತ್ಯಗಾತ್ಮ (ಜೀವಾತ್ಮ) ಎಂಬ ಸುಜ್ಞಾನ. ಸಮಾಪನ್ನ–ಚೆನ್ನಾಗಿ ಹೊಂದಿದ, ಕೂಡಿಕೊಂಡ. ಪಯಃ (=ಪಯಸ್) ಪಯೋನಿಧಿ–ಹಾಲಿನ ಕಡಲು, ಕ್ಷೀರಸಮುದ್ರ. ಸಮಂತು–ಚೆನ್ನಾಗಿ, ಅಚ್ಚುಕಟ್ಟಾಗಿ.

ಎನಗಾವಂ ತಲೆದೋರ್ಪನೀ ಸೊಗಯಿಪೆನ್ನಾಕಾರಮಂ ಕಂಡು ಕಾ-
ಮಿನಿ ಕಲ್ಲೋಲವಳಾವಳೆಂಬ ಮುದ್ರಿತಾಹಂಕಾರ[4][ನಂ][4] ನೋಡಿ ನೋ-
ಡಿ ನೆಲಕ್ಕಿಕ್ಕುವ ಮೃತ್ಯುವಂ ನೋಡುವ ಕಾಳವ್ಯಾಳನಂಟಿರ್ಪಗು-
ರ್ಬಿನ [5]ಹೆಮ್ಮಾರಿಯ[5]ನಾವನೆತ್ತಿಜಿಪಂ ಶ್ರೀ ಚಂದ್ರಚೂಡಾಮಣೀ ೨೭

೨೭ ಯಾವನು ತಾನೆ ನನ್ನೆದುರಿಗೆ ಕಾಣಿಸಿಕೊಳ್ಳಬಲ್ಲವನು, ಸೊಗಸಾಗಿ ಕಾಣುವ ನನ್ನ ರೂಪವನ್ನು ಕಂಡು ನನ್ನಲ್ಲಿ ಮೋಹಗೊಳ್ಳದ ಹೆಂಗಸು ಯಾವಳು ತಾನೆ ಇದ್ದಾಳು ಎಂಬ ಹಿಗ್ಗಿನಿಂದ ಅಹಂಕಾರಪಡುವವನನ್ನು ಬಿಡದೆ ನೋಡಿ

1 ಬಿ 2 ಪೋದಾ 3 ದ್ದಸಮಾಪ್ನ 4 ದಿಂ 5 ಮ...ಮಾರಿ (ಮ).

ಕೊಲ್ಲುವ ಮೃತ್ಯುವನ್ನು, ಕೃಷ್ಣಸರ್ಪದಂತೆ ಭಯಂಕರವಾಗಿರುವ ಆ ಮೃತ್ಯುದೇವತೆಯನ್ನು, ಯಾವನು ತಾನೆ ಎಲ್ಲಿ ಅರಿಯಬಲ್ಲನು? ಓ, ಚಂದ್ರಚೂಡಾಮಣೀ.

ತಲೆದೋರು–(ಎದುರಿಗೆ) ಕಾಣಿಸಿಕೊಳ್ಳು, ಎದುರಿಸು, ಎದುರಾಗು. ಕಾಮಿನಿ–ಕಾಮಿಸುವ (ಬಯಸುವ) ಹೆಂಗಸು. ಕಣ್ಸೋಲು–ಕಣ್ಣಿನಿಂದ ನೋಡಿ ಪರವಶವಾಗು. ಮುದಿತ – ಸಂತೋಷಗೊಂಡ; ಹಿಗ್ಗಿದ. ನೆಲಕ್ಕಿಕ್ಕು – ಕೊಲ್ಲು; ಮಣ್ಣುಮುಕ್ಕಿಸು. ನೊಣೆ – ನುಂಗು. ಕಾಳವ್ಯಾಳ–ಕಾಳಸರ್ಪ, ಕೃಷ್ಣಸರ್ಪ; ಕರಿನಾಗರಹಾವು. ಅಗುರ್ವು (ಬ್ಬು) – ಭಯಂಕರತೆ; ಹೆದರಿಕೆ ಹುಟ್ಟಿಸುವಂಥದು. ಹೆಮ್ಮಾರಿ – ಮೃತ್ಯುದೇವತೆ. ಎತ್ತಲ್–ಎಲ್ಲಿ, ಯಾವ ಸ್ಥಳದಲ್ಲಿ.

ಭವಮತ್ತೇಭ[1][ವ][1] ಕೊಲ್ವ ಚಿತ್ತ[2][ನೆನಗಾ][2] ಕರ್ಮೋರಗಂ ಕೊಲ್ವ ಕೋ-
ಳ್ಗವನಂಗಾಗ್ನಿಯ ಬೇಗೆಗಂ ದುರಿತಶಾರ್ದೂಲಾಭಿಘಾತಕ್ಕಮು-
ತ್ಸವದಿಂದಂ ಗುರಿಯಾಗಿ ಕೋಟಲೆಗೆ ಪಕ್ಕಾಗಿರ್ದ ಮಚ್ಚಿತ್ತಮಂ
ಶಿವ ನೀಂ ಸಂಹರಿ[3]ಸಾಂ ಮರಲ್ದೆಱೆದಪೆಂ ಶ್ರೀ ಚಂದ್ರಚೂಡಾಮಣೀ ೨೮

೨೮ ಸಂಸಾರವೆಂಬ ಮದ್ದಾನೆಯನ್ನು ಕೊಲ್ಲಬೇಕೆಂಬ ಮನಸ್ಸು ನನಗೆ. (ಆದರೆ ಜನ್ಮಜನ್ಮಾಂತರಗಳಿಗೆ ಕಾರಣವಾದ) ಕರ್ಮಜಾಲವೆಂಬ ಸರ್ಪವು ನನ್ನನ್ನು ಕಚ್ಚಿ ಕೊಲ್ಲುವುದಕ್ಕಾಗಿ ಹಿಡಿದುಕೊಂಡಿದೆ. ಈ ಕರ್ಮಪರಿಣಾಮಕ್ಕೂ ಕಾಮಾಗ್ನಿಯ ಬೇಗೆಗೂ ಪಾಪವೆಂಬ ಹುಲಿಯ ಹೊಡೆತದ ಗಾಯಕ್ಕೂ ಸಂತೋಷದಿಂದಲೇ ಒಳಗಾಗಿ ಕೋಟಲೆಗೊಂಡಿರುವ ನನ್ನ ಮನಸ್ಸನ್ನು ಸಂಹರಿಸು, ಲಯಮಾಡು–ಎಂದು ಮತ್ತೆ ನಿನ್ನನ್ನು ಬೇಡಿಕೊಳ್ಳುತ್ತೇನೆ, ಹೇ ಚಂದ್ರಚೂಡಾಮಣೀ.

ಭವ–ಸಂಸಾರ. ಮತ್ತೇಭ–ಮದಿಸಿದ ಆನೆ. ಉರಗ–ಹಾವು. ಕೋಳ್–ಕೊಳ್ಳೆ, ಸೂರೆ; ಹಿಡಿಯುವುದು, ಕಚ್ಚುವುದು. ದುರಿತ–ಪಾಪ ಶಾರ್ದೂಲ–ಹುಲಿ. ಅಭಿಘಾತ–ಬಲವಾದ ಹೊಡೆತ, ಗಾಯ ಉತ್ಸವ–ಸಂತೋಷ. ಪಕ್ಕಾಗು–ಒಳಗಾಗು. ಮರಲ್ದು–ಮರಳಿ, ಮತ್ತೆ.

ಪತಿಯಂ ವಂಚಿಪ ಜೋಷೆಯಂತವೊಲೆ ನಿನ್ನೊಳ್ ಕೂಡಿಕೊಂಡಿರ್ದ ಮು-
ರ್ಮತಿಯುಂ ನಿ[4][ವ್ಮ][4]ನಗಲ್ಚಿ ತಮ್ಮ ದೆಸೆಗಿರ್ದಾದೋರ್ಮೆಯುಂ ನಿನ್ನಂ ಜಗ-
ತ್ಪತಿಯಂ ವಂಚಿಸುವಿಂದ್ರಿಯಪ್ರಕರವೆಂಬೀ ದ್ರೋಹರಂ ಕೂಡಡಂ-
ಗಿ ತಗುಳ್ದಿಯ್ದೆ ಕಱುತ್ತು ನಿಗ್ರಹಿಸುವೆಂ ಶ್ರೀ ಚಂದ್ರಚೂಡಾಮಣೀ ೨೯

---

1 ವ 2 ವ×ಗ 3 +ಸಿ 4 ಮ

೧೯ ಓ ಚಂದ್ರಚೂಡಾಮಣೀ, ನನ್ನ ಇಂದ್ರಿಯಗಳು ನನ್ನ ಒಡೆಯನಾದ ನಿನ್ನನ್ನು ವಂಚಿಸಿವೆ: ಆ ವಂಚನೆ ಒಂದು ದೋಷ. ಆ ಅಪರಾಧಕ್ಕೆ ಶಿಕ್ಷೆಯಾಗಿ, ನಿನ್ನಲ್ಲಿ ಕೂಡಿಕೊಂಡಿದ್ದ ದುರ್ಮತಿಯಾದ ನನ್ನನ್ನು ನಿನ್ನಿಂದ ಅಗಲಿಸಿ ತಮ್ಮ ಕಡೆಗೆ ಸೆಳೆದುಕೊಂಡು ಜಗತ್ಪತಿಯಾದ ನಿನ್ನನ್ನು ವಂಚಿಸಿರುವ ಆ ಇಂದ್ರಿಯಗಳ ಸಮೂಹವೆಂಬ ಈ ದ್ರೋಹಿಗಳನ್ನು ಕೂಡಲೆ ಮರೆಯಲ್ಲಿದ್ದು ಹಿಂದಿನಿಂದ ಬಲಾತ್ಕಾರವಾಗಿ ದಮನಮಾಡುತ್ತೇನೆ.

ದಂಡ–ಶಿಕ್ಷೆ. ಅಡಗು–ಮರೆಯಾಗಿರು, ಅವಿತುಕೊಳ್ಳು. ತಗುಳ್–ಬೆನ್ನಟ್ಟಿ ಹೋಗು, ಸಮೀಪಿಸು. ಕಱುತ್ತು (ಧಾ., ಕಱು)–ಉಗ್ರವಾಗಿ, ಆವೇಶಗೊಂಡು, ಬಲವಾಗಿ. ನಿಗ್ರಹಿಸು–ದಮನಮಾಡು, ಶಿಕ್ಷಿಸು.

ಪಡೆವಾಗಳ್ ಕೆಡುವಾಗಳಾವೆಡೆಯೊಳಂ ನೋಡುತ್ತಾಗಳಾರ್ತತ್ವಮಂ
ಪಡೆಯಲ್ಕಾಪ[1][ದೆ][1] ನೋಡಿ ನೋಡಿ ಪೆಱರ್ಗಾಗಿರ್ಪಂಗನಾನೀಕಮಂ
ಪಡೆಯಲ್ಕಾಮಿಸಿ ದಂದುಗಂಬಡಿಸದೆನ್ನಂ ನಿಮ್ಮ ನಿಶ್ಚಿಂತಮ-
ರ್ಪಡೆಯಂ ಕಾಮಿಸುವಂತೆ ಮಾಡು ದಯೆಯಿಂ ಶ್ರೀ ಚಂದ್ರಚೂಡಾಮಣೀ ೨೦

೨೦ ಯಾವುದೇ ಒಂದು ವಸ್ತುವನ್ನು ಬಯಸಿ ಪಡೆವಾಗ, ಹಾಗೆ ಬಯಸಿ ಪಡೆದ ವಸ್ತುವಿನ ನಿಮಿತ್ತದಿಂದ ಕೆಡುವಾಗ,—ಈ ಯಾವುದೇ ಸಂದರ್ಭದಲ್ಲಿ ಒದಗಬಹುದಾದ ಕಷ್ಟಸಂಕಷ್ಟಗಳನ್ನು ವಿಚಾರಿಸಿನೋಡುವಾಗ, ಇತರರಿಗಾಗಿರುವ ಸ್ತ್ರೀಯರನ್ನು (ಎಂದರೆ ಪರಸತಿಯರನ್ನು) ಪಡೆಯಲು ಸಮರ್ಥನಾಗಿರುವಾಗ ಅವರನ್ನು ಕಂಡೂ ಕಂಡೂ (ಎಂದರೆ ಪರಸತಿಯರೆಂದು ತಿಳಿದೂ ತಿಳಿದು) ಅವರನ್ನು ಪಡೆಯಲು ಇಷ್ಟಪಟ್ಟು ನಾನು ತೊಂದರೆಗೆ ಒಳಗಾಗುವಂತೆ ಮಾಡಬೇಡ. ನಿಶ್ಚಿಂತವಾಗಿ ನೆಮ್ಮದಿಯಿಂದ ಇರಬಹುದಾದಂತಹ ನಿನ್ನ ಸನ್ನಿಧಿಯನ್ನು ನಾನು ಬಯಸುವಂತೆ ಕೃಪೆಮಾಡು.

ಆರ್ತತ್ವ–ಕಷ್ಟ, ಸಂಕಟ. ಆಪದೆ (ಆಪಂದೆ)–ಆಗುವುದಾದರೆ. ಪೆಱರ್ಗೆ–ಪರರಿಗೆ, ಇತರರಿಗೆ. ಅಂಗನಾನೀಕ–ಹೆಂಗಸರ ಗುಂಪು; ಸ್ತ್ರೀಸಮೂಹ. ಕಾಮಿಸು–ಬಯಸು. ದಂದುಗ–ತೊಂದರೆ, ಕಷ್ಟ.

ಮುಳಿಸಾ[2]ರ್ಪೊಳ್[2]ಸದಿರ್ಪದಾರಜ್ಞತೆಯುಂ ಕೇಟ್ಮಿಡದಾರೊಳ್ ಗುಣಂ-
ಗಳನ[3]ಟ್ಟ್ಯಾ[3]ಡಿಸದಾರ ನಿರ್ಮಳತೆಯುಂ ನಿರ್ಮೂಲಿಸಿ ಮಾಡದಾ-
ರಳವಂ ತುಂಡಿಸದಾರ ಕೀರ್ತಿಲತೆಯುಂ ಚಿಚ್ಚಿತ್ರದಾಸಂಜುಪೆಂ
ಮುಳಿಸಿಂಗಂ ಮುಳಿಸಾಗದಿ[1][ಕ್ಕ(ಮ)][1]ಗುಣಂ ಶ್ರೀ ಚಂದ್ರಚೂಡಾಮಣೀ ೨೧

---

1 ಟಿ 2 ರಾರ (ಮ) 3 ಕ್ಯ (ಮ) 4 ಕೃತ (?) ಕೃದು (ಮ)

೩೧ ಕೋಪ ಯಾರ ಒಳ್ಳೆಯತನವನ್ನು ತಾನೆ ಅಡಗಿಸಿಬಿಡದು? ಯಾರ ತಿಳಿವಳಿಕೆಯನ್ನು ತಾನೆ ಕೆಡಿಸದು, ನಿಕೃಷ್ಟವಾಗಿ ಮಾಡದು? ಯಾರ ಒಳ್ಳೆಯ ಗುಣಗಳನ್ನು ತಾನೆ ನಾಶಪಡಿಸದು? ಯಾರ ಪರಿಶುದ್ಧತೆಯನ್ನು ತಾನೆ ಸಂಪೂರ್ಣವಾಗಿ ನಾಶಮಾಡದು? ಯಾರ ಸಾಮರ್ಥ್ಯವನ್ನು ತಾನೆ ಖಂಡಿಸದು? ಯಾರ ಕೀರ್ತಿಲತೆಯನ್ನು ಕಿತ್ತುಹಾಕದು? ಕೋಪಕ್ಕೆ ನಾನು ಹೆದರುತ್ತೇನೆ. ನನಗೆ ಕೋಪವುಂಟಾಗದಿರಲಿ. (ಅದು ಕೋಪಗೊಳ್ಳದಿರುವುದು) ಒಂದು ಗುಣ.

ಮುಳಿಸು–ಕೋಪ. ಅದಿರ್ಪು–ನಡುಗಿಸು; ಬೆದರಿಸು. ಅಱಿತ–ತಿಳಿವಳಿಕೆ, ಜ್ಞಾನ. ಅಟ್ಟೊಕ್ಕಡಿಸು–ನಾಶಗೊಳಿಸು, ನಷ್ಟಪಡಿಸು, ಲಯಮಾಡು. ಅಳವು–ಸಾಮರ್ಥ್ಯ. ತುಂಡಿಸು–ತುಂಡುಮಾಡು, ಕತ್ತರಿಸು.

**ಧನಲೋಭಂ ತನುಲೋಭಮೆಂಬೆರಡು ವಿಘ್ನಂ ಸ್ವರ್ಗ ಮೋಕ್ಷಕ್ಕಮೆಂ-**
**ತೆನೆ ದಾನಂ ಪೊಱಗಾಗಿ ದೇವಗತಿಯೆಂತಕ್ಕುಂ ತನು ತ್ಯಾಗಮಂ**
**ಮನದೊಳ್ ಮಾಡದಡೆಂತು ಮೋಕ್ಷಪದಮಕ್ಕುಂ ಬೇಡ ನಿರ್ವ್ಯಾಜದಿಂ**
**ಧನಲೋಭಮೆಂ[1][ಬೆ][1]ರೆಡು ಶ್ರೀ ಚಂದ್ರಚೂಡಾಮಣೀ** ೩೨

೩೨ ಸಂಪತ್ತಿನ ಮೇಲಿನ ಅತ್ಯಾಶೆ, ದೇಹದ ಮೇಲಿನ ಪ್ರೀತಿ,—ಇವೆರಡು ಸ್ವರ್ಗಪ್ರಾಪ್ತಿಗೂ ಮೋಕ್ಷಸಂಪಾದನೆಗೂ ಅಡ್ಡಿಯಾಗಿವೆ. ಹೇಗೆಂದರೆ, ತನ್ನ ಧನವನ್ನು ದಾನಮಾಡದೆ ಹೋದರೆ ಸ್ವರ್ಗದಲ್ಲಿ ದೇವಪದವಿ ಹೇಗೆ ತಾನೆ ಉಂಟಾಗಬಲ್ಲದು? ಮನಸ್ಸಿನಲ್ಲಿ ದೇಹಾಭಿಮಾನವನ್ನು ತೊರೆದ ಹೊರತು ಮೋಕ್ಷಪದವಿ ಹೇಗೆ ತಾನೆ ಲಭಿಸೀತು? ಶ್ರೀ ಚಂದ್ರಚೂಡಾಮಣೀ, ಧನಸಂಗ್ರಹಬುದ್ಧಿ, ದೇಹದ ಮೇಲಿನ ಪ್ರೀತಿ, ಇವೆರಡೂ ಯಾವ ಅಗತ್ಯವೂ ಇಲ್ಲದೆ ನನಗೆ ಬೇಡ. (ಧನ ಇರುವುದಾದರೆ ದಾನಕ್ಕಾಗಿ ಇರಬೇಕು, ದೇಹ ಮೋಕ್ಷಸಂಪಾದನೆಗಾಗಿ ಬೇಕು ಎಂದು ಧ್ವನಿ).

ಲೋಭ–ಅತ್ಯಾಶೆ, ಪ್ರೀತಿ. ಗತಿ–ಪದವಿ, ಸ್ಥಿತಿ. ನಿರ್ವ್ಯಾಜ–ನಿಷ್ಕಾರಣ.

**ಅದಟಾಯ್ತುರ್ವರೆಯಾಯ್ತು[2][ವು][2]ನ್ನತ ಬಳಂ ತಾನಾಯ್ತು[3][ವಾ][3]ಯುಷ್ಯಮಾ-**
ಯ್ತಿದುಮಂತರ್ಥಮದಾಯ್ತು ಸಂಪದಮುಮಾ ಸಂಭೋಗಭೋಗಂಗಳು-
ನ್ಮದ[ವಿ][3]ದ್ರಂಗೆಯುಮಿಂದ್ರಿಯಾಳಿಗಮಿವಂ ನೋಡಲ್ಕರಂ ಸಂತತಂ
ಹುದುಗಿತ್ತುನ್ಮದವೆಂದಡೇನುಜೀವಂ ಶ್ರೀ ಚಂದ್ರಚೂಡಾಮಣೀ ೩೩

೩೩ ಪರಾಕ್ರಮವಾಯಿತು; ಭೂಮಿ ಆಯಿತು; ಉನ್ನತವಾದ ಬಲವಾಯಿತು; ಆಯುಷ್ಯವಾಯಿತು; ಧನ ದೊರಕಿತು. ಈ ಎಲ್ಲ ಸಂಪತ್ತೂ ಭೋಗಭಾಗ್ಯಾಸುಭವಗಳೂ ಇಂದ್ರನಿಗೆ ಕೂಡ ಗರ್ವವನ್ನುಂಟುಮಾಡುವುವು. ವಿಚಾರಿಸಿ ನೋಡಿದಾಗ

1 ಬ 2 ವು (ಅ, ಮ) 3 ಮಾ (ಅ, ಮ) 4 ಉಂಟುಮಾಡು ಇ

ಇಂದ್ರಿಯಸಮೂಹಗಳಲ್ಲಿ ಇವೆಲ್ಲವುಗಳಿಂದ ಗರ್ವ ಬಂದು ಸೇರಿಕೊಳ್ಳುತ್ತದೆ. ಅವನ್ನು ಬಿಟ್ಟು ಏನುಳಿದಿದೆ? (ಈ ಪದ್ಯದಲ್ಲಿ ತುಸ ಅರ್ಥಕ್ಲೇಶವಿದೆ.)

ಅದಟು–ಪರಾಕ್ರಮ. ಉರ್ವರೆ–ಭೂಮಿ. ಅರ್ಥ–ಹಣ, ಧನ. ಕರಂ–ವಿಶೇಷ ವಾಗಿ. ಸಂತತಂ–ಯಾವಾಗಲೂ. ಹುದುಗಿರು–ಅಡಗಿರು, ಮರೆಯಾಗಿ ಸೇರಿಕೊಂಡಿರು. ಉನ್ಮದ–ಹೆಚ್ಚಿದ ಗರ್ವ, ಸೊಕ್ಕು. ಉಚಿ–ಬಿಡು.

ಸುತ ಮಿತ್ರ ಪ್ರಿಯರಂಬರಾಭರಣ ಪುಷ್ಪಾಲೇಪ ಸಾಮ್ರಾಜ್ಯಮೆಂ-
ಬಿತ[1][ರ][1]ಪ್ರಾಪ್ತಿಯೊಳಪ್ಪನರ್ಥಕ ಸುಖಕ್ಕಾನಂದಮಂ ಮಾಡದ-
ಕ್ಷತಯೋಗಾಮೃತ ಸೇವನಾಜನಿತ ರೋಮಾಂಚ ಪ್ರಮೋದಾನುಸಂ-
ಯುತದಾನಂದಮನೆಯ್ದುಗೆನ್ನಯ ಮನಂ ಶ್ರೀ ಚಂದ್ರಚೂಡಾಮಣೀ ೩೪

೩೪ ಮಗ, ಸ್ನೇಹಿತ, ತನಗೆ ಇಷ್ಟನಾದವನು; ವಸ್ತ್ರಾಭರಣ, ಪುಷ್ಪ(ಧಾರಣೆ), ಗಂಧಲೇಪ; ಸಾಮ್ರಾಜ್ಯ;–ಇವಲ್ಲದೆ ಇನ್ನೂ ಉಳಿದವುಗಳಿಂದ ಆಗುವ ಅನರ್ಥಕಾರಿ ಸುಖಸಾಮಗ್ರಿಗಳಿಂದ ಆನಂದಪಡದೆ, ಅನೂನವಾದ (ಕೊರೆಯಾಗದ) ಯೋಗ ವೆಂಬ ಅಮೃತಪಾನದಿಂದ ಉಂಟಾಗುವ ರೋಮಾಂಚಕರವಾದ ಸುಖಸಂತೋಷ ದಿಂದ ಕೂಡಿದ ಆನಂದವನ್ನು ನನ್ನ ಮನಸ್ಸು ಸೇರಲಿ, ಶ್ರೀ ಚಂದ್ರಚೂಡಾಮಣೀ.

ಅಂಬರ–ವಸ್ತ್ರ. ಆಭರಣ–ಒಡವೆ. ಪುಷ್ಪ–ಹೂ (ಮುಡಿಯುವುದು). ಆಲೇಪ–ಸುಗಂಧದ ಬಳಿತ. ಅಪ್ಪ–ಆಗುವ. ಅನರ್ಥಕ–ಅನರ್ಥಕಾರಿ, ದುಷ್ಪರಿಣಾಮವನ್ನುಂಟು ಮಾಡುವ. ಅಕ್ಷತ–ಊನವಾಗದ, ಅರೆಕೊರೆಯಾಗದ. ಪ್ರಮೋದ–ಸಂತೋಷ. ಸಂಯುತ–ಕೂಡಿರುವ. ಎಯ್ದುಗೆ–ಸೇರಲಿ.

ರಸಮಂ ಕಟ್ಟಿದರೆಂಬ ಸಿದ್ಧರ ಸಮಂ[2][ತಾ][2] ವಾರ್ಧಿಯಂ ಕಟ್ಟಿ ಸಾ-
ಹಸನಂ ಕಂಡೆನದೆಲ್ಲಿಯುಂ ಮಱೆ[3]ತು ಕಾಣಲ್ಬಾರದಾ ತೃ[3][ಷ್ಣೆ][3]ಯೆಂ-
ಬ ಸಮುದ್ರಾರ್ಧಮನಾಂತು ಕಟ್ಟಿದವನಂ ತೃಷ್ಣಾಬ್ಧಿಯಂ ಕಟ್ಟಲೊಂ-
ದೆ ಸಮರ್ಥಂ ನಿಜಯೋಗವಜ್ರಕುಧರಂ ಶ್ರೀ ಚಂದ್ರಚೂಡಾಮಣೀ ೩೫

೩೫ ಪಾದರಸವನ್ನು ಚಿನ್ನವಾಗಿ ಮಾಡಿದ ಸಿದ್ಧರನ್ನು ಕಂಡಿದ್ದೇನೆ; ಸಮುದ್ರ ವನ್ನು ಅಡ್ಡಗಟ್ಟಿದ ಸಾಹಸಿಯನ್ನು ಕಂಡಿದ್ದೇನೆ; ಆದರೆ, ಆಶೆಯೆಂಬ ಸಮುದ್ರದ ಅರ್ಧವನ್ನಾದರೂ ತಡೆಗಟ್ಟಿದವನನ್ನು ಮರೆತಾದರೂ ಕಾಣಲು ಬರುವುದಿಲ್ಲ. ಆಶಾಸಮುದ್ರವನ್ನು ಕಟ್ಟಬಲ್ಲ ಏಕಮಾತ್ರ ವ್ಯಕ್ತಿಯೆಂದರೆ, ಯೋಗವಿದ್ಯೆಯಲ್ಲಿ ವಜ್ರಪರ್ವತಸ್ವರೂಪನಾದ ಪರಮಯೋಗಿ.

ರಸ–ಪಾದರಸ. ಸಮಂತು–ಚೆನ್ನಾಗಿ. ವಾರ್ಧಿ–ಸಮುದ್ರ. ಸಾಹಸನ್–ಸಾಹಸಿಗ. ತೃಷ್ಣೆ–ಆಶೆ. ಕುಧರ–ಬೆಟ್ಟ, ಪರ್ವತ.

1. ದ 2 ತಂ 3 ಷೆ

ದೆಸೆಯಂ ನುಂಗಿಯು[1][ಮುರ್ವಿಯು೦][1] ನೊಣೆದುಮಂಭೋರಾಶಿಯಂ ಪೀರ್ದು[2][ಮಾ][2]
ಗಸಮಂ ತಳ್ತಡರ್ದೆ(ಱ[3][ಯು][3]೦ ದಣಿಗುಮೇ ಮತ್ತೆಯ್ದದಿಪ್ಪಲ್ಲಿಗೆ-
ಯ್ದಿಸುತಿರ್ಕುಂ ಚಲದಿಂದೆ ತೃಷ್ಣೆ ನೆಗಳ್ದಾ ತೃಷ್ಣಾಗ್ನಿಯಂ ಕೂಡೆ ಮ-
[4][ಬ್ಗಿ][4]ಸಲಕ್ಕುಂ ನಿಜತತ್ತ್ವವೆಂಬಮೃತದಿಂ ಶ್ರೀ ಚಂದ್ರಚೂಡಾಮಣೀ ೩೬

೩೬ ದಿಕ್ಕುಗಳನ್ನು ನುಂಗಿಯೂ ಭೂಮಿಯನ್ನು ನುಂಗಿಯೂ ಸಮುದ್ರವನ್ನು ಹೀರಿಯೂ ಆಕಾಶವನ್ನು ವ್ಯಾಪಿಸಿಕೊಂಡು ಏರಿಯೂ ಆ ತೃಷ್ಣೆ ತೃಪ್ತಿಹೊಂದುವುದೇನು? ಮತ್ತೆ ಮತ್ತೆ ಸೇರಲಾಗದ ಕಡೆಗೆ ಸೇರಿಸುತ್ತಿರುವುದು. ಲೋಕಪ್ರಸಿದ್ಧವಾದ ಈ ತೃಷ್ಣೆಯೆಂಬ ಅಗ್ನಿಯನ್ನು ನಿಜತತ್ತ್ವವೆಂಬ ಅಮೃತದಿಂದ ಮಾತ್ರ ನಾಶಪಡಿಸಲು ಸಾಧ್ಯವಾಗುವುದು, ಶ್ರೀ ಚಂದ್ರಚೂಡಾಮಣೀ.

ದೆಸೆ–ದಿಕ್ಕು. ಉರ್ವಿ–ಭೂಮಿ. ನೊಣೆ–ನುಂಗು. ಅಂಭೋರಾಶಿ–ಸಮುದ್ರ. ತಳ್ತು–ವ್ಯಾಪಿಸಿಕೊಂಡು, ಮೇಲೆ ಬಿದ್ದು. ಎಯ್ದು–ಸೇರು. ನೆಗಳ್–ಇರು, ಪ್ರಸಿದ್ಧವಾಗಿರು. ಮುಗ್ಗ–ನಾಶವಾಗು, ನಾಶಮಾಡು.

ಸೊಡರಿಪ್ಪನ್ನೆವರಂ ತಮಂ ಪೆಣರುಗೆಂತುಂ ಜ್ಯೋತಿ ಪೋದಾಗಳಾ-
ಗ[5][ಡೆ][5]ಕೈಕೊಳ್ವವೊಲೀತನಂ ಹೃದಯದೊಳ್ ಕೂಡಿ[6][ರ್ಪಿ][6]ನಂ ತೃಷ್ಣೆ ನಾ-
ಲ್ಕ[7][ಡೆ][7]ಯೊಕ್ಕುಂ ಬಳಿಕಂತೆ ಪರ್ಬುಗುಮದಕ್ಕೊಂದುಂಟು ಕರ್ತವ್ಯ ಸಂ-
ಗಡನಾಂ ನಿಮ್ಮನೆ ಚಿತ್ತದೊಳ್ ನಿಲಿಸುವೆಂ ಶ್ರೀ ಚಂದ್ರಚೂಡಾಮಣೀ ೩೭

೩೭ ಸೊಡರು ಉರಿಯುತ್ತಿರುವವರೆಗೂ ಕತ್ತಲೆ ಅದರೊಂದಿಗೆ ಹೆಣಗಾಡುತ್ತಿರುತ್ತದೆ; ಬೆಳಕು ನಂದಿದ ಕೂಡಲೆ ಅದು ಮತ್ತೆ ಆವರಿಸಿಕೊಳ್ಳುತ್ತದೆ. ಅದೇ ರೀತಿ ತೃಷ್ಣೆ ನನ್ನ ಹೃದಯದಲ್ಲಿ ಕೂಡಿಕೊಂಡಿರುವವರೆಗೂ ನಾಲ್ಕು ಕಡೆಗೂ ಹಬ್ಬಿ ಹರಡುವುದು. (ತೃಷ್ಣೆಯ ನಿವಾರಣೆಗೆ) ಕರ್ತವ್ಯವೆಂಬ ಒಂದು ಉಪಾಯ ಉಂಟು. ಅದೇನೆಂದರೆ, ನಿಮ್ಮನ್ನೆ ನನ್ನ ಸಂಗಡ ಚಿತ್ತದಲ್ಲಿ ನೆಲೆಗೊಳಿಸುವುದು.

ತಮ–ಕತ್ತಲೆ. ಪೆಣರ್–ಹೆಣಗು, ಹೋರಾಡು. ಜ್ಯೋತಿ–ಪ್ರಕಾಶ, ಬೆಳಕು.

ದಿಟಮೇ ಭಾವಿಸಲಿಂದ್ರಜಾಲಮದನೆಲ್ಲಂ ಕಂಡು ಕಣ್ಮಾಯೆಯಿಂ
ದಿಟಮೆಂದಿರ್ಪ ಭವತ್ಪ್ರಸಾದದೊಳೆ ಕಂಡಾ ಮಾಯೆಯಂ ಚಿತ್ತದೊ-
ಳ್ದಿಟಮೆಂದಿರ್ಪಱ[8]ದೆಂ[8] ಬಳಿಕ್ಕ ಪುಸಿಯೆಂಬಂತೆಲ್ಲ[9][ಮಂ][9] ಮಾಯೆಯಂ
ದಿಟಮಲ್ಲೆಂದಱ[10]ದೆಂ[10] ಬಳಿಕ್ಕ ತಿಳಿ[11]ದೆಂ[11] ಶ್ರೀ ಚಂದ್ರಚೂಡಾಮಣೀ ೩೮

---

1 ಮುರ್ವಿಯುಂ (ಅ), ಮುರ್ವಿಯ೦ (ಮ) 2 ರ್ದಾಕಾ (ಅ), ರ್ದಾಕಾ (ಮ)
3 ಯು 4 ಗ್ಗಿ 5 ಡ 6 ಪ್ಪಿ 7 ಡ 9 ರುಂ 8, 10, 11 ದೇಂ

೩೮ ವಿಚಾರಮಾಡಿನೋಡಿದರೆ ಇಂದ್ರಜಾಲವು ದಿಟವೇನು? (ದಿಟವಲ್ಲ.) ಅದೆಲ್ಲವನ್ನು ಕಂಡಾಗ ಕಣ್ಕಟ್ಟುಮಾಯೆಯಿಂದ ದಿಟವೆಂದೇ ಇದ್ದುದಾಗಿತ್ತು. (ಅಂತೆಯೇ ಜಗತ್ತು ಎಂದು ಅಧ್ಯಾಹಾರ). ಕಣ್ಣಿಗೆ ಕಂಡ ಮಾಯಾ ಪ್ರಪಂಚವನ್ನು ಮನಸ್ಸಿನಲ್ಲಿ ದಿಟವೆಂದೇ ತಿಳಿದಿದ್ದೆನು. ಬಳಿಕ, ಹೇ ಚಂದ್ರಚೂಡಾಮಣಿ, ನಿಮ್ಮ ಅನುಗ್ರಹದಿಂದ ಎಲ್ಲವೂ ಮಾಯೆ, ಹುಸಿ, ಸತ್ಯವಲ್ಲ ಎಂದು ಅರಿತುಕೊಂಡೆನು.

("ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಎಂಬ ಅದ್ವೈತ ಸಿದ್ಧಾಂತದ ಹೊಳಹು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.)

ಇಂದ್ರಜಾಲ–ಯಕ್ಷಿಣಿ ವಿದ್ಯೆ. ಕಣ್ಮಾಯೆ–ಕಣ್ಣಿನ ಮೋಸ; ಕಣ್ಕಟ್ಟುಮಾಯೆ.

ಶಿವಿರಂ ಪೋದೊಡೆ ಕಾಣ್ಬ ಕಣ್ಮಲರೊಳೆತ್ತಾನುಂ ಮರುಳ್ಪೋದೊ[1]ಡೆ[1]-
ಲ್ಲಮನಿಂಬಾಗಱಿವೊಂದು ಬುದ್ಧಿಯೊಳೆ ಯೆನ್ನಂ ಮೋಹಿಸುತ್ತಿರ್ಪ ಮಾ-
ಯೆ ಮನೋಜಾರಿ ಭವ[2]ತ್ಪ್ರ[2]ಭಾವದೊಳೆ ಪೋಗಲ್ಕೇವಲ ಜ್ಞಾನಮಾ-
ಗಿ ಮನಂ ವಿಶ್ವಮುಮಂ ಜಲಕ್ಕನಱಿಗುಂ ಶ್ರೀ ಚಂದ್ರಚೂಡಾಮಣೀ ೩೯

೩೯ ಕತ್ತಲೆ ತೊಲಗಿಹೋದಾಗ (ಹೂವಿನಂತೆ ಅರಳಿದ) ಬಿಟ್ಟಕಣ್ಣು ಹೊರಗಿನ ಪ್ರಪಂಚವನ್ನು ಕಾಣಬಲ್ಲದು. (ಇರುಳ್ಗತ್ತಲೆ ಅಥವಾ ಕಣ್ಗತ್ತಲೆ ಮುಸುಕಿದ್ದರೆ ಕಣ್ಣು ಬಿಟ್ಟುಕೊಂಡಿದ್ದರೂ ಏನೂ ಕಾಣಿಸದು). ಹುಚ್ಚು ಬಿಟ್ಟುಹೋದರೆ ಎಲ್ಲ ವಿದ್ಯಮಾನವನ್ನೂ ಚೆನ್ನಾಗಿ ಅರಿಯಬಹುದು. (ಹುಚ್ಚರ ಬುದ್ಧಿಗೆ ಎಲ್ಲವೂ ಅಸ್ತವ್ಯಸ್ತ). ಎಲೈ, ಮನ್ಮಥವೈರಿಯಾದ ಶಂಭುವೇ, ನನ್ನನ್ನು (ವಿಷಯಸುಖಕ್ಕೆ) ಸೆಳೆಯುತ್ತಿದ್ದ ಮಾಯೆ ನಿನ್ನ ಪ್ರಭಾವದಿಂದ ತೊಲಗಿಹೋದದ್ದರಿಂದ (ಸತ್ಯ ಯಾವುದು ಮಿಥ್ಯ ಯಾವುದು, ಆತ್ಮ ಯಾವುದು ಅನಾತ್ಮ ಯಾವುದು ಎಂಬ) ಸಮಗ್ರ ಜ್ಞಾನೋದಯವಾಯಿತು. ಆದರಿಂದದಾಗಿ ನನ್ನ ಮನಸ್ಸು ಸಮಸ್ತ(ವಿಶ್ವ) ವನ್ನೂ ಸ್ಪಷ್ಟವಾಗಿ ಅರಿಯುವಂತಾಯಿತು.

ಶಿವಿರ–ಕತ್ತಲೆ. ಕಣ್‌ಮಲರ್–ಹೂವಿನಂತೆ ಅರಳಿದ ಕಣ್ಣು; ಬಿಟ್ಟ, ತೆರೆದ, ಕಣ್ಣು. ಇಂಬಾಗಿ–ಚೆನ್ನಾಗಿ, ಸೊಗಸಾಗಿ. ಮೋಹಿಸು–ಆಕರ್ಷಿಸು, ಸೆಳೆ. ಮನೋಜಾರಿ–ಮನ್ಮಥನ ಶತ್ರು: ಶಿವ. ಭವತ್–ನಿನ್ನ. ಜಲಕ್ಕನೆ–ತಟ್ಟನೆ; ಸ್ಪಷ್ಟವಾಗಿ.

ಅರಿಷಡ್ವರ್ಗದೊಳೊಂದುಮಂ ಪ್ರೇರಿಸುವತ್ಯಾಪೇಕ್ಷೆಯುಂ ಬಿಟ್ಟು ರಾ-
ಗರಸಾಸಕ್ತಿಯನೊಕ್ಕು ಮಿಕ್ಕಱಿವು ತಾನಾಗಿರ್ಪ ತತ್ತ್ವಂ ನಿರಂ-
ತರವೆನ್ನೊಳ್ನೆಲೆಗೊಂಡಿರಲ್ನಿಜ ಶಿವಶ್ರೀಪಾದಪಂಕೇರುಹ-
ಸ್ಮರಣಪ್ರಾಪ್ತಿ ಜಗಿ+ಲ್ತು ಸಿಲ್ಕೆ ಮನದೊಳ್ ಶ್ರೀ ಚಂದ್ರಚೂಡಾಮಣೀ ೪೦

---

1 ಡ (ಮ) 2 ಪ್ರ (ಮ) +ಗಿ

೪೦ ಕಾಮ ಕ್ರೋಧಗಳೇ ಮೊದಲಾದ ಆರು ಶತ್ರುಗಳಲ್ಲಿ ಒಂದನ್ನೂ ಪೋಷಿಸದೆ, ಇಚ್ಛಾಪೂರ್ವಕವಾಗಿ ತ್ಯಜಿಸಿ, (ಎಂದರೆ ಅರಿಷಡ್ವರ್ಗವನ್ನು ಸಂಪೂರ್ಣವಾಗಿ ಹೊಡೆದೋಡಿಸಿ), (ಹೆಂಡತಿ ಮಕ್ಕಳು ಮೊದಲಾದವರ) ಪ್ರೇಮವನ್ನು ಸವಿಯುವ ಆಸಕ್ತಿಯನ್ನು ಹೊರದೂಡಿ, (ಇದರ ಪರಿಣಾಮವಾಗಿ) ಮೇಲಾದ ಜ್ಞಾನವೇ ತಾನಾಗಿರುವ ನಿಜತತ್ತ್ವವು (ತತ್ತ್ವಜ್ಞಾನವು) ಯಾವಾಗಲೂ ನನ್ನಲ್ಲಿ ನೆಲೆಗೊಂಡಿರಲಾಗಿ, ಸಂಪತ್ಕರವಾದ ಶಿವಚರಣಕಮಲವನ್ನು ನೆನೆಯುವ ಒಂದು ಸುಯೋಗ ನನ್ನ ಮನಸ್ಸಿನಲ್ಲಿ ಬಿಡದೆ ಕೂಡಿಕೊಂಡು ನಿಲ್ಲಲಿ.

ಅರಿಷಡ್ವರ್ಗ–ಮನುಷ್ಯನ ಶ್ರೇಯಸ್ಸಿಗೆ ಅಡ್ಡಿಪಡಿಸುವ ಆರು ಒಳಹಗೆಗಳು : ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ. ಪೊರೆ–ಕಾಪಾಡು, ಪೋಷಿಸು. ರಾಗರಸ–ಪ್ರೇಮದ ಸವಿ. ಒಗು(>ಒಕ್ಕು)–ಹೊರಸೂಸು, ಹೊರಹಾಕು. ಮಿಕ್ಕಱಿವು–ಮೇಲಾದ ಜ್ಞಾನ. ಪಂಕೇರುಹ–ಕಮಲ. ಜಗಿಲ್ತು (ಜಗಿಲ್)–ಕೂಡಿಕೊಂಡು, ಸಂಲಗ್ನವಾಗಿ.

ರಜವವ್ಯಾಕುಳ ನಿರ್ವಿಕಾರಗತನವ್ಯಾವಸ್ಥೆಯೊಳ್ ಸ್ವಸ್ಥನಾ-
ಗಿ ಜಯಂಗೆಯ್ದಿರಲೀಯದೀ ಮನದಹಂಕಾರಾದಿ ಜನ್ಮಮಹೀ-
ಜಜಬೀಜಂಗ[1]ಳ್[1]ನಿಕ್ಕುವೆಂಬ ಬಗೆಯಿಂ ಪೊಕ್ಕಾವಗಂ ಮನ್ಮನೋಂ-
ಬುಜದೊಳ್ ಪ್ರಾಕೃತಿಸ್ವಸ್ಥಭಾವದೆಸಕಂ ಶ್ರೀ ಚಂದ್ರಚೂಡಾಮಣೀ ೪೧

೪೧ ರಜೋಗುಣವಿದ್ದೂ ದುಃಖರಹಿತನಾಗಿ ಯಾವ ವಿಧವಾದ ಮನೋವಿಕಾರಕ್ಕೆ ಒಳಗಾಗದವನಾಗಿ, ಎಂಥ ಗೊಂದಲದ ಸ್ಥಿತಿಯಲ್ಲಿಯೂ ಸ್ವಸ್ಥನಾಗಿ (ಅಚಲಮನಸ್ಕನಾಗಿ), (ಇಂದ್ರಿಯಗಳನ್ನು) ಗೆಲ್ಲಲು ಅವಕಾಶ ಕೊಡದ ಮನಸ್ಸಿನ ಅಹಂಕಾರಾದಿಗಳು ಜನ್ಮಾಂತರವೆಂಬ ವೃಕ್ಷಕ್ಕೆ ಬೀಜಗಳಾಗುವುವು ಎಂಬ ಎಣಿಕೆಯಿಂದ ನನ್ನ ಮನಸ್ಸೆಂಬ ಕಮಲದಲ್ಲಿ ಸಹಜವಾಗಿ ತನ್ನಲ್ಲಿ ತಾನಿರುವ (ಸ್ವಸ್ಥ) ಸ್ವ-ಭಾವದ ಒಂದು ಸ್ಥಿತಿ ಪ್ರವೇಶಿಸಿ ನೆಲಸಿರುವುದು.

ರಜ-ರಜೋಗುಣ (ಜೀವನದಲ್ಲಿ ಸಹಜವಾಗಿರುವ ಸತ್ತ್ವರಜಸ್ತಮೋಗುಣಗಳಲ್ಲಿ ಒಂದು). ವ್ಯಾಕುಲ(ಳ)–ದುಃಖ, ಚಿಂತೆ. ನಿರ್ವಿಕಾರ–ಯಾವ ಬಗೆಯ ವಿಕಾರವೂ ಇಲ್ಲದಿರುವುದು. ಅಂಬುಜ–ಕಮಲ. ಪ್ರಾಕೃತಿ(ತ?)–ಪ್ರಕೃತಿಸಿದ್ಧವಾದ ಮೂಲಸ್ಥಿತಿಯ. ಎಸಕ–ರೀತಿ, ಸ್ಥಿತಿ; ಪಾಟ.

ಪರಮಜ್ಯೋತಿಯನಾಂತು ಧಿಕ್ಕರಿಪು[2]ವ ಂತ[3]ದೃ[3]ಷ್ಟಿಯಂ ಕಾಣದಂ-
ತಿರೆ ಮಾಚ್ಕಿಂ ಸಕಲ ಪ್ರಕಾಶರುಚಿಗೈತಂಪಡ್ಡಮಾಗಿರ್ಪಮ-
ಬ್ಬರಿಸುತ್ತಿರ್ಪ ತ[4][ಮಂ][4]ಶದೀ[5]ಯ[5] ತಮಮಂ ಬೆಂಕೊಂಡು ಮಚ್ಚಿತ್ತಮಂ
ಹರ ನಿನ್ನುಜ್ವಳ ತೇಜ[6][ದಿಂ][6] ಬೆಳಗು ನೀಂ ಶ್ರೀ ಚಂದ್ರಚೂಡಾಮಣೀ ೪೨

1 ದೆ 2 ದ 3 ದ್ಯ 4 ಪಂ 5 ಯ್ಯ 6 ವಂ

೪೨ ಅಬ್ಬರಿಸುತ್ತಿರುವ (ಎಂದರೆ ಪ್ರಬಲವಾಗಿ ತನ್ನ ಪ್ರಭಾವವನ್ನು ಬೀರುತ್ತಿರುವ) ಅಜ್ಞಾನವೆಂಬ ಕತ್ತಲೆ ಅತ್ಯಂತ ಪ್ರಕಾಶವನ್ನು ಹೊಂದಿ (ಕೆಟ್ಟುಹೋಗಿಲ್ಲವನ್ನೂ) ತಿರಸ್ಕರಿಸುತ್ತಿರುವ ಒಳಗಿನ ದೃಷ್ಟಿಯನ್ನು ಕಾಣದಂತೆ ಮಾಡುವುದು, ಮತ್ತು ಎಲ್ಲ ಪ್ರಕಾಶ (ಜ್ಞಾನದ) ಕಿರಣಕ್ಕೆ ಎದುರಾಗಿ ಅಡ್ಡವಾಗಿ ನಿಂತು, ಅದನ್ನು ತಡೆಗಟ್ಟಿರುವುದು. ಎಲೈ ಹರನೆ, ಶ್ರೀ ಚಂದ್ರಚೂಡಾಮಣಿಯೆ, ಆ ಕತ್ತಲೆಯನ್ನು ಬೆಂಬತ್ತಿ ನಿನ್ನ ಉಜ್ಜ್ವಲವಾದ ತೇಜಸ್ಸಿನಿಂದ ನನ್ನ ಚಿತ್ತವನ್ನು ಬೆಳಗು.

ರುಚಿ–ಕಾಂತಿ; ಕಿರಣ. ಬೆಂಕೊಳ್–ಹಿಂಬಾಲಿಸು, ಬೆನ್ನಟ್ಟು.

ಎಲೆ ಸಂಸಾರದ ಸಾರ ಸೌಖ್ಯರುಚಿ ಜಿಹ್ವೋಪಸ್ಥಯುಗ್ಮಂ ರಸಾ-
ವಳಿಯಿಂದಪ್ಪ ಸುಖಂ ಸ್ವತಾಳು ರಸನಾಸಂಯೋಗಮಾತ್ರಂ ರತಾ-
ವಳಿ ತಾಂ ಭಾವಿಸೆ ಪಾದಮಾತ್ರಸುಖಮಾ ವಿದ್ಯುಚ್ಚಳತ್ಸೌಖ್ಯಸಂ-
ಕುಳಮಂ ಮಾಡದೆ ಮಾಡನಂತಸುಖಮಂ ಶ್ರೀ ಚಂದ್ರಚೂಡಾಮಣೀ ೪೩

೪೩ ಎಲೆ ಚಂದ್ರಚೂಡಾಮಣೀ! ಸಂಸಾರದ ಸಾರವತ್ತಾದ ಸೌಖ್ಯದ ಸವಿ ಎಂದರೆ ಎರಡು: ಒಂದು ನಾಲಗೆ, ಇನ್ನೊಂದು ಉಪಸ್ಥ. ರಸಾವಳಿಯಿಂದ (ಎಂದರೆ, ಸಿಹಿ ಹುಳಿ ಉಪ್ಪು ಕಾರ ಮುಂತಾದವುಗಳಿಂದ) ದೊರಕುವ ಸುಖ ಎಂದರೆ ತನ್ನ ದವಡೆ ಮತ್ತು ನಾಲಗೆಗಳ ಕೂಡಿಕೆ; ಯೋಚಿಸಿ ನೋಡಿದರೆ, ಸ್ತ್ರೀ ಸಂಭೋಗಸುಖ, ಅದರ ಕಾಲುಭಾಗ ಮಾತ್ರ (ನಾಲಗೆಯ ಸುಖ ಯಾವಜ್ಜೀವವೂ ಇರತಕ್ಕದ್ದು; ರತಿಸುಖವಾದರೋ ಆ ಅವಧಿಯ ಕಾಲುಭಾಗದ ಅವಧಿಯವರೆಗೆ ಮಾತ್ರ). ಮಿಂಚಿನಂತೆ ಕ್ಷಣಕಾಲ ಚಲಿಸುವ ಈ ಸೌಖ್ಯಗಳನ್ನು ನನಗೆ ಉಂಟು ಮಾಡದೆ ಶಾಶ್ವತವಾದ (ಮೋಕ್ಷ) ಸುಖವನ್ನು ದಯಪಾಲಿಸು.

ಸಂಸಾರ – ಜನನಮರಣಸಹಿತವಾದ ಬದುಕು. ಜಿಹ್ವೆ – ನಾಲಗೆ. ರುಚಿ – ಸವಿ. ಉಪಸ್ಥ–ಸ್ತ್ರೀಪುರುಷರ ಜನನೇಂದ್ರಿಯ, ಮುಖ್ಯವಾಗಿ ಸ್ತ್ರೀಜನನೇಂದ್ರಿಯ; ಯೋನಿ. ಯುಗ್ಮ–ಜೋಡಿ. ತಾಳು–ಅಂಗುಳು, ಒಳಬಾಯಿಯ ಮೇಲ್ಭಾಗ. ರಸನೆ–ನಾಲಗೆ. ರತಾವಳಿ–ಬಗೆಬಗೆಯ ಸಂಭೋಗ. ಪಾದ–ಕಾಲುಭಾಗ. ವಿದ್ಯುತ್–ಮಿಂಚು. ಚಳ–ಚಂಚಲ. ಸಂಕುಳ–ಸಮೂಹ.

ಸತತೋಚ್ಛಿಷ್ಟಮುಖಂ ಸಬಾಷ್ಪನಯನಂ ಶ್ಲೇಷ್ಮೋತ್ಕಟಂ ಘ್ರಾಣಮೂ-
ರ್ಜಿತಮೂತ್ರಾಂಬು ಪುರೀಷಪೂರ್ಣಜಠರಂ ಸ್ತ್ರೀರೂಪಮಾರೂಪಮ-
ಪ್ರತಿ[1][ಯೆಂ][1]ದಿರ್ದೆನದಂ ವಿಭಾವಿಸಿದೆನೀಗಳಾನೆ ಬೀಭ[2][ತ್ಸ][2]ಹೇ-
ತು ತದಾ[3][ಸ][3]ಕ್ತಿಯನೆಯ್ದೆ ಪೇಸಿ ಬಿಸುಟೆಂ ಶ್ರೀ ಚಂದ್ರಚೂಡಾಮಣೀ ೪೪

---

1 ಯಿ 2 ತ್ಸು 3 ಶ

೪೪ ಯಾವಾಗಲೂ ಎಂಜಲನ್ನುಳ್ಳ ಬಾಯಿ; ಕಂಬನಿದುಂಬಿದ ಕಣ್ಣು; ಅತಿ ಸಿಂಬಳದಿಂದ ತುಂಬಿದ ಮೂಗು; ಹೆಚ್ಚಾದ ಉಚ್ಚೆ ಮತ್ತು ಅಮೇಧ್ಯದಿಂದ ತುಂಬಿದ ಹೊಟ್ಟೆ. ಸ್ತ್ರೀರೂಪವೊಂದೇ ಉತ್ಕೃಷ್ಟವಾದ ರೂಪ, ಎಣೆಯಿಲ್ಲದ್ದು, ಎಂದಿದ್ದೆ; ಅದನ್ನು ಕುರಿತು ಈಗ ಚೆನ್ನಾಗಿ ಆಲೋಚಿಸಿ ನೋಡಲಾಗಿ ಅದು ಹೇಸಿಕೆಗೆ ಮೂಲ ಎಂದು ಅರಿತೆನು. ಅದರಲ್ಲಿ ಇಟ್ಟಿದ್ದ ಆಸಕ್ತಿಯನ್ನು ಬಹಳ ಜುಗುಪ್ಸೆಗೊಂಡು ಬೀಸಾಡಿದ್ದೇನೆ, ಶ್ರೀ ಚಂದ್ರಚೂಡಾಮಣೀ.

ಉಚ್ಛಿಷ್ಟ–ಎಂಜಲು; ತಿರಸ್ಕರಿಸಿದ್ದು, ಬೇಡವೆಂದು ಬಿಟ್ಟದ್ದು. ಮುಖ–ಬಾಯಿ. ಬಾಷ್ಪ–ಕಂಬನಿ, ಕಣ್ಣೀರು. ನಯನ–ಕಣ್ಣು. ಉತ್ಕಟ–ಅಧಿಕ, ಹೆಚ್ಚಿಗೆ. ಘ್ರಾಣ–ಮೂಗು. ಊರ್ಜಿತ–ಏಳಿಗೆ ಹೊಂದುವ. ಪುರೀಷ–ಮಲ, ಅಮೇಧ್ಯ. ಮೂತ್ರಾಂಬು–ಉಚ್ಚೆಯ ನೀರು. ಬೀಭತ್ಸ–ಅಸಹ್ಯ, ಜುಗುಪ್ಸೆ. ಹೇತು–ಕಾರಣ.

**ಸಲೆ ನೋವಿಲ್ಲದ ಪುಣ್ಣೆ ಮೂತ್ರಜಳನಾಳಕ್ಕುದ್ಭವದುರ್ಗಂಧಸಂ-**
**ಕುಳಕತ್ಯುತ್ಕಟ ರಕ್ತಮಂಡಲಕಶುದ್ಧಾಸ್ರಾಂಬುಪಾತ್ರಕ್ಕೆ ತಾ-**
**ನೊಲವಿಂ ಚರ್ಮಬಿಲಕ್ಕೆ ಮಂಬಲಿಸುತಿರ್ಕುಂ ಕಾಂಕ್ಷೆ ತಲ್ಲಬ್ಧ ಸೌ-**
**ಖ್ಯಲವಂ ಮಿಂಚುವ ಮಿಂಚಿನಿಂದಲಚಿರಂ ಶ್ರೀ ಚಂದ್ರಚೂಡಾಮಣೀ** ೪೫[1]

೪೫ ಹೆಣ್ಣಿನ ಚರ್ಮಬಿಲ (= ಯೋನಿ, ಉಪಸ್ಥ) ಎಷ್ಟು ಹೇಯವಾದುದೆಂದರೆ.– ಅದು ನೋವಿಲ್ಲದ ಹುಣ್ಣು; ಉಚ್ಚೆ ನೀರಿನ ನಳಿಕೆ; ಅತ್ಯಂತ ಕೆಟ್ಟ ನಾತದ ಕೂಟ; ಕಡುಗೆಂಪು ವರ್ತುಲ; ಅಶುದ್ಧವಾದ ರಕ್ತದ (= ರಜಸ್ಸಿನ, ಮುಟ್ಟಿನ) ಪಾತ್ರೆ — ಇಂಥ ಚರ್ಮದ ಬಿಲಕ್ಕಾಗಿ (ನನ್ನ) ಆಶೆಯಿಂದ ಕೂಡಿದ ಮನಸ್ಸು ಒಲಿದು ಹಾತೊರೆಯುತ್ತಿದೆ. ಅದರಿಂದ ದೊರೆಯುವ ಲವಲೇಶ ಸುಖ ಮಿಂಚುವ ಮಿಂಚಿಗಿಂತಲೂ ಹೆಚ್ಚು ಅಶಾಶ್ವತವಾದದ್ದು.

ಅಸ್ರಾಂಬು–ರಕ್ತ. ಚರ್ಮಬಿಲ–ಹೆಣ್ಣಿನ ಜನನೇಂದ್ರಿಯ, ಯೋನಿ.

**ಶುನಕಂ ಕೀಟಕಪೀಟಕಭ್ರಮಣಮುಂಗಚ್ಚಿನ್ನಲಾಂಗೂಲಕ-**
**ರ್ಣನದೊಂದಂಗಜತಾಪದಿಂ ಶುನಿಯ ಬೆನ್ನೊಳ್ಪೋಪವೊಲ್ತನ್ನ ನೋ-**
**ವನುಮಾರಯ್ಯದೆ ಪೆರ್ಚುತುಂ ಸಲಿವುತಂ ಭೋಗೋಪಭೋಗಕ್ಕೆ ಪೇ-**
**ಟ್ಮನಮುಂ ತರ್ಪುದಿದೇಂ ವಿಚಿತ್ರತರವೋ ಶ್ರೀ ಚಂದ್ರಚೂಡಾಮಣೀ** ೪೬

೪೬ ಹುಳುಗಳ ಪೆಟ್ಟಿಗೆಯಾಗಿ, ಕತ್ತರಿಸಿದ ಬಾಲಕಿವಿಗಳುಳ್ಳದ್ದಾಗಿ, ಅಲೆಯುತ್ತ ಬಿದಿಯ ತಾಪವನ್ನು ತಡೆಯಲಾರದೆ ಹೆಣ್ಣುನಾಯಿಯ ಹಿಂದೆ ಹೋಗುವ ಗಂಡುನಾಯಿಯಂತೆ, ಉಂಟಾಗುವ ನೋವನ್ನೂ ಲಕ್ಷಿಸದೆ ಹೆಚ್ಚಿಕೊಳ್ಳುತ್ತ ಸಲಿಯುತ್ತ

1 ಗಿ

ಭೋಗೋಪಭೋಗಗಳಿಗೆ ನನ್ನ ಮನಸ್ಸು ಕೊಡುವುದು ಇದೇನು ವಿಚಿತ್ರತರವಾಗಿ ಕಾಣುತ್ತಿದೆಯಲ್ಲಾ, ಶ್ರೀ ಚಂದ್ರಚೂಡಾಮಣೀ.

ಕೀಟಕ-ಕ್ರಿಮಿ, ಹುಳು. ಪೇಟಕ-ಪೆಟ್ಟಿಗೆ. ಭ್ರಮಣ-ತಿರುಗುವುದು, ಅಲೆತ. ಛಿನ್ನಲಾಂಗೂಲಕರ್ಣ-ಕತ್ತರಿಸಿಹೋದ, ತುಂಡಾದ, ಬಾಲ ಮತ್ತು ಕಿವಿ. ಅಂಗಜತಾಪ-ಮನ್ಮಥತಾಪ, ಕಾಮುಕತೆಯ ಬೇಗೆ; (ಪ್ರಾಣಿಗಳ ವಿಷಯದಲ್ಲಿ) ಬೆದೆ.

ಎನಿತೋಲಾಡಿಯುಮೆಂತು ಮೂಡಿಮುಳುಗಾಡುತ್ತಿರ್ದುಮಾನಂದದಿಂ
ಮನವಾರಲ್ಕೆಗೆದೀಂಟಿಯುಂ ದಣಿಯದೊಮ್ಮೊಂದೊಮ್ಮೆ ನಿರರ್ಗಳಂ
ಕನಲು[1][ತ್ತಿ][1]ರ್ದುಮೊಱಲ್ದು ರಾಗರಸಸಂಪೂರ್ಣಾಬ್ಧಿಯೊಳ್ ಚಿತ್ತಮೇ-
ನೆನಗೀ ಲೋಲತೆಯಾಗದಿರ್ಕೆ ಸತತಂ ಶ್ರೀ ಚಂದ್ರಚೂಡಾಮಣೀ ೪೭

೪೭ ಪ್ರಣಯಸುಖದ ಸಾರವೆಂಬ ತುಂಬಿದ ಕಡಲಿನಲ್ಲಿ ಎಷ್ಟೆಷ್ಟು ಓಲಾಡಿಯೂ ಬಗೆಬಗೆಯಲ್ಲಿ ತೇಲಿ ಮುಳುಗಿಯೂ ಆನಂದದಿಂದ ಮನಸ್ತೃಪ್ತಿಯಾಗುವವರೆಗೆ ಮೊಗೆದು ಕುಡಿದೂ ನನ್ನ ಮನಸ್ಸು ದಣಿಯದೆ ಇದೆ; ಒಂದೊಂದು ಸಲ ಒಂದೇ ಸಮನಾಗಿ ತಡೆಯಿಲ್ಲದೆ ಪ್ರೀತಿಯಿಂದ ಕೂಡಿದ್ದರೂ ಕೋಪಗೊಂಡಿರುತ್ತದೆ. ಏನಿದು? ಹೇ ಚಂದ್ರಚೂಡಾಮಣೀ, ಎಡೆಬಿಡದ ಈ ವಿಷಯಲೋಲಾಪ್ತಿ ನನಗೆ ಆಗದಿರಲಿ.

ಆರ್-ತಣಿ, ತೃಪ್ತಿಗೊಳ್ಳು. ಈಂಟು-ಕುಡಿ. ದಣಿ (-ತಣಿ)-ತೃಪ್ತಿಗೊಳ್ಳು; ಆಯಾಸಗೊಳ್ಳು. ನಿರರ್ಗಳ-ತಡೆಯಿಲ್ಲದೆ. ಕನಲು-ಕೋಪಗೊಳ್ಳು. ಒಱಲ್-ಪ್ರೀತಿಸು. ಅಬ್ಧಿ-ಸಮುದ್ರ. ಲೋಲತೆ-ಆಸಕ್ತಿ. ಸತತ-ಯಾವಾಗಲೂ.

ನರೆಯಿಂದಂ ತೆರೆಯಿಂದಮೂದ ಸಿರೆಯಿಂದಂ ಮುಪ್ಪಿನೊಳ್ ಜೋಲ್ವುಗೆ-
ಟ್ಟಿರುತಂ [2]ವ್ಯಾಧಿ[2]ಯಿಂ ಕೋಳಾಗಿಯುಂ ಸೊಪ್ಪುತುಂ ತಳ್ತಿರ್ದ ದಾರಿದ್ರ್ಯದೊಳ್
ಪೊರಳುತ್ತಿರ್ದುಮದೊತ್ತುವಿಂತಿ[3][ಮ][4]ಪೆಂತಂ ರೋಗದಾ ಕುತ್ತಮಂ
ಹರಿಪೊಂದೌಷಧಿಯಂ ಸಮಂತು ದಯೆಗೆಯ್ ಶ್ರೀ ಚಂದ್ರಚೂಡಾಮಣೀ ೪೮

೪೮ ಮುಪ್ಪಿನಲ್ಲಿ ನರೆಕೂದಲಿನಿಂದಲೂ ಚರ್ಮದ ಸುಕ್ಕಿನಿಂದಲೂ ಉಬ್ಬಿದ ರಕ್ತನಾಳಗಳಿಂದಲೂ ಅಂದಗೆಟ್ಟು ಯಾವಾಗಲೂ ರೋಗದಿಂದ ಸರಳ ಕೃಶವಾಗುತ್ತಲೂ, ಜೊತೆಗೂಡಿದ ಬಡತನದಲ್ಲಿ ಹೊರಳಾಡುತ್ತಿದ್ದರೂ ಕೂಡ ಆಶೆಯೆಂಬುದು ಹೋಗಲೊಲ್ಲದು. ಈ (ಆಶೆಯೆಂಬ) ರೋಗವನ್ನು ಹೋಗಲಾಡಿಸುವ ಔಷಧಿಯನ್ನು ಚೆನ್ನಾಗಿ ದಯಪಾಲಿಸು, ಶ್ರೀ ಚಂದ್ರಚೂಡಾಮಣೀ.

ತೆರೆ-ಚರ್ಮದ ಸುಕ್ಕು. ಸಿರೆ-(ಉಬ್ಬಿದ) ರಕ್ತನಾಳ, ನರ. ಸಮೆ-ಸವೆ, ಕೃಶವಾಗು. ತಳ್ತಿರು-ಸೇರಿರು, ಕೂಡಿಕೊಂಡಿರು. ಆಳಿಪು ಆಶೆ.

---

1 ಕ್ತಿ  2 ಬ್ಯಾ (ಮ)  3 ಳುಸ (ಮ)  4 ವ (ಅ, ಮ)

ಸ್ಮರವಲ್ಲೀಪರಿವೃದ್ಧಿಗೇಕ ಸಲಿಲಂ ಮೋಹಾರ್ಣವೋ[1]ದ್ಯ[1]ನ್ನಿಶಾ-
ಕರಬಿಂಬಂ ಪ್ರಮದಾಮ್ರವೈಭವ[2]ವಸಂತಂ[2] ಲೋಲುಪಾಂಭೋರು[3]ಹೋ[3]-
ತ್ಕರ ಭಾಸ್ವ[4]ದ್ದ್ಯು[4]ತಿ[5]ಯೆಂಬ[5]ಗುರ್ವನೊಳಕೊಂಡೀ ರಾಗಮಂ ಮನ್ಮನೋಂ-
ತರದೊಳ್ ಪತ್ತಿರದಂತೆ ಕರ್ಚಿ ಕಳೆ ನೀಂ ಶ್ರೀ ಚಂದ್ರಚೂಡಾಮಣೀ ೪೯

೪೯ ಮನ್ಮಥನೆಂಬ ಬಳ್ಳಿಯ ಬೆಳವಣಿಗೆಗೆ ಹೊಯ್ನೀರು, ಮೋಹವೆಂಬ ಸಮುದ್ರಕ್ಕೆ ಚಂದ್ರಬಿಂಬ, ಸ್ತ್ರೀಯೆಂಬ ಮಾವಿನರದ ಸೊಗಸಿಗೆ ವಸಂತಋತು, ವಿಷಯಾಸಕ್ತಿಯೆಂಬ ಕಮಲಪುಷ್ಪಸಮೂಹಕ್ಕೆ ಸೂರ್ಯಪ್ರಕಾಶ, ಎಂಬಂತಹ ಭಯಂಕರತೆಯನ್ನು ಒಳಗೊಂಡ (ಐಹಿಕ) ಪ್ರೀತಿಯನ್ನು ನನ್ನ ಮನಸ್ಸಿನೊಳಗೆ ಹತ್ತಿಕೊಂಡಿರದಂತೆ ನೀನು ತೊಳೆದು ತೊಡೆದುಹಾಕು, ಶ್ರೀ ಚಂದ್ರಚೂಡಾಮಣೀ. (ನೀರು ಹಾಕಿದರೆ ಬಳ್ಳಿ ಬೆಳೆಯುತ್ತದೆ; ಚಂದ್ರೋದಯ ಕಾಲದಲ್ಲಿ ಸಮುದ್ರ ಉಕ್ಕುತ್ತದೆ; ವಸಂತದಲ್ಲಿ ಮಾವಿನ ಚಿಗುರಿ ಮೆರೆಯುತ್ತದೆ; ಸೂರ್ಯೋದಯದಿಂದ ಕಮಲ ಅರಳುತ್ತದೆ. ಕಾಮ ಮೋಹ ಸ್ತ್ರೀವ್ಯಾಮೋಹ ಇವೆಲ್ಲವೂ ನಮ್ಮ ಇಂದ್ರಿಯಗಳ ಆಸಕ್ತಿಯಿಂದ (ವಿಷಯಾಸಕ್ತಿಯಿಂದ) ಬೆಳೆಯುತ್ತವೆ. ಈ ಆಸಕ್ತಿಯನ್ನು ತ್ಯಜಿಸಿದಲ್ಲದೆ ತತ್ತ್ವಜ್ಞಾನ ಉಂಟಾಗುವುದಿಲ್ಲ.)

ಸ್ಮರ–ಮನ್ಮಥ. ವಲ್ಲಿ–ಬಳ್ಳಿ. ಸಲಿಲ–ನೀರು. ಅರ್ಣವ–ಸಮುದ್ರ. ನಿಶಾಕರ–ಚಂದ್ರ. ಪ್ರಮದೆ ಸ್ತ್ರೀ. ಲೋಲುಪ-ವಿಷಯಾಸಕ್ತ. ಭಾಸ್ವತ್–ಸೂರ್ಯ. ದ್ಯುತಿ–ಕಾಂತಿ, ಪ್ರಕಾಶ. ಅಗುರ್ವು–ಭಯಂಕರತೆ. ಕರ್ಚು–ತೊಳೆ.

ಸ್ಥಿರಧರ್ಮದ್ರುಮಭಂಗಕೃತ್ಪರಶು ಶಾಂತಿ[ಕ್ಷ್ಮಾಭೃತ್][6]ವಜ್ರಂ ಕ್ಷಮಾಂ-
ಬುರುಹೋನ್ಮೂಲನಮತ್ತಹಸ್ತಿ ಕರುಣಾಂಭೋರಾಶಿಕುಂಭೋದ್ಭವಂ
ಪರಮಜ್ಞಾನಸುಧಾಂಶುರಾಹುವೆನಿಸಿತ್ತೀದ್ವೇಷಮಾದ್ವೇಷಮಂ
ಹರ ನೀಂ ಸಂಹರಿಸಾಂ ಮರಲ್ದೆ ಜಿಶಪೆಂ ಶ್ರೀ ಚಂದ್ರಚೂಡಾಮಣೀ ೫೦

೫೦ ಸನಾತನಧರ್ಮವೃಕ್ಷವನ್ನು ಕಡಿದು ನಾಶಮಾಡುವ ಕೊಡಲಿ, ಶಾಂತಿಯೆಂಬ ಪರ್ವತವನ್ನು ಪುಡಿಮಾಡುವ ವಜ್ರಾಯುಧ, ಕ್ಷಮೆ (ಸಹನೆ) ಎಂಬ ತಾವರೆ ಹೂವನ್ನು ಬೇರುಸಹಿತ ಕಿತ್ತುಹಾಕುವ ಮದ್ದಾನೆ, ಕರುಣೆಯೆಂಬ ಕಡಲನ್ನು ಆಪೋಶನ ತೆಗೆದುಕೊಂಡು ಕುಡಿದುಬಿಡುವ ಆಗಸ್ತ್ಯ, ಶ್ರೇಷ್ಠವಾದ ಪಾರಮಾರ್ಥಿಕ ಜ್ಞಾನವೆಂಬ ಚಂದ್ರನನ್ನು ನುಂಗಿನೊಣೆಯುವ ರಾಹು ಎಂದೆನಿಸಿತ್ತು ಈ ದ್ವೇಷಬುದ್ಧಿ. ಹರ, ಶ್ರೀ ಚಂದ್ರಚೂಡಾಮಣೀ, ಆ ದ್ವೇಷಬುದ್ಧಿಯನ್ನು ನೀನು ನಾಶಮಾಡು ಎಂದು ಮತ್ತೆ ಮತ್ತೆ ಬೇಡಿಕೊಳ್ಳುತ್ತೇನೆ.

---

1 ದ್ಯಾ 2 ಸಂತಂ 3 ಪೋ 4 ದ್ಯು 5 ಯೊಂದ (ಮ) 6 ಕ್ಷಾದ್ರ
1, 2, 3 ಸ್ವೀಪಾ (ಮ)

ದ್ರುಮ–ವೃಕ್ಷ, ಮರ. ಭಂಗಕೃತ್–ನಾಶಮಾಡುವ. ಪರಶು – ಕೊಡಲಿ. ಕ್ಷ್ಮಾಭೃತ್ (ಕ್ಷ್ಮಾಧ್ರ?)–ಪರ್ವತ, ಬೆಟ್ಟ. (ಕ್ಷ್ಮಾಭೃತ್ ಎಂಬ ತಿದ್ದುಪಡಿಯಿಂದ ಛಂದೋಭಂಗವಾಗಿದೆ.) ಅಂಬುರುಹ–ತಾವರೆ ಹೂ. ಮತ್ತಹಸ್ತಿ–ಮದ್ದಾನೆ. ಅಂಭೋರಾಶಿ – ಸಮುದ್ರ. ಕುಂಭೋದ್ಭವ–ಅಗಸ್ತ್ಯಮುನಿ. ಸುಧಾಂಶು–ಚಂದ್ರ. ಮರಲ್ದು–ಮರಳಿ, ಮತ್ತೆ. ಎಱೆ–ಬೇಡು.

ಒಡಲಂ ತಳ್ತಡಗಿರ್ಪುದೆಂತು ನೆಳಲಂತಾ ಮಾೞ್ಕೆಯಿಂ ತನ್ನ ಪೊ-<br>
ಕ್ಕೆಡೆಯಂ ಪೊಕ್ಕೆಡೆಗೀಡುಮಾಡುವುದು ಕರ್ಮಂ ಕರ್ಮದಾತೃಷ್ಣೆಯಂ<br>
ಕೆಡಿಸಲ್ ನೀನೆ ಸಮರ್ಥನೆನ್ನುಭಯ ಕರ್ಮಧ್ವಂಸಮಂ ಮಾಡು ಮಾ-<br>
ೞ್ಪೊಡೆ ನೀಂ ಪ್ರಾರ್ಥಿಸಿ ಬೇಡಿಕೊಂಬೆನಿದನಾಂ ಶ್ರೀ ಚಂದ್ರಚೂಡಾಮಣೀ    ೫೧

೫೧ ನೆರಳು ದೇಹವನ್ನು ಅನುಸರಿಸಿ ಅದರಲ್ಲಿ ಹೇಗೆ ಸೇರಿಕೊಂಡಿರುವುದೋ ಅದೇ ರೀತಿಯಲ್ಲಿ ಕರ್ಮವು ತಾನು ಯಾವ ಸ್ಥಳವನ್ನು (ಎಂದರೆ ದೇಹವನ್ನು) ಪ್ರವೇಶಿಸಿತೋ ಅದೇ ಸ್ಥಳಕ್ಕೆ (ದೇಹಕ್ಕೆ) ಗುರಿಪಡಿಸುವುದು. (ಎಂದರೆ ಕರ್ಮವು ದೇಹವನ್ನು ಮತ್ತೆ ಮತ್ತೆ ಜನ್ಮಕ್ಕೆ ಗುರಿಪಡಿಸುವುದು, ಜನ್ಮಜನ್ಮಾಂತರಕ್ಕೆ ಕರ್ಮವೇ ಕಾರಣ ಎಂದು ಭಾವ). ಕರ್ಮಕ್ಕೆ ಕಾರಣವಾದ ತೃಷ್ಣೆ(ಆಶೆ)ಯನ್ನು ನಾಶ ಮಾಡಲು ನೀನೆ ಸಮರ್ಥನು. ನನ್ನ ಎರಡು ಕರ್ಮಗಳನ್ನೂ (ಎಂದರೆ ಪುಣ್ಯ ಪಾಪ ಕರ್ಮಗಳನ್ನು) ನೀನು ಹುಟ್ಟಡಗಿಸುವುದಾದರೆ ಹಾಗೆ ಮಾಡು. ಚಂದ್ರಚೂಡಾಮಣಿ, ಈ ಒಂದು ಕೃಪೆಯನ್ನು ನೀನು ಮಾಡು ಎಂದು ನಿನ್ನನ್ನು ನಾನು ಬೇಡಿಕೊಳ್ಳುತ್ತೇನೆ.

ತಳ್ತು–ಹೊಂದಿಕೊಂಡು, ಸೇರಿಕೊಂಡು. ಮಾೞ್ಕೆ–ರೀತಿ. ಪೊಕ್ಕೆಡೆ–ಹೊಕ್ಕ ಎಡೆ, ಪ್ರವೇಶಿಸಿದ ಸ್ಥಳ. ಈಡುಮಾಡು–ಗುರಿಪಡಿಸು, ಒಳಪಡಿಸು. ಕರ್ಮದಾತೃ–ಕರ್ಮವನ್ನು ಕೊಡುವಂಥದು: ಕರ್ಮಕ್ಕೆ ಕಾರಣವಾದದ್ದು. ಉಭಯಕರ್ಮ–ಪುಣ್ಯಪಾಪಗಳೆಂಬ ಎರಡು ಬಗೆಯ ಕರ್ಮ.

ಪಿಡಿವೃತ್ತಂ ತನುವಂ ತದುಂಗಡಿದೊಡಂ ಖಂಡಗಳಂ ಕೂಡೆ ಕೊ-<br>
ಯ್ದೊಡಮುಗ್ರಾನಲಕುಂಡದೊಳ್ ಕೆಡೆದೊಡಂ ವಾರಾಶಿಯೊಳ್ ಪೊಕ್ಕೊಡಂ<br>
[1][ಕಡೆಗೇ][1]ಗೆಯ್ದೊಡಮೆಂತುಮೇೞ್ತಿದಿನಾಗರ್ಂ ನೆಟ್ಟನುಂಡಲ್ಲದೆಂ[2]<br>
ಕೆಡಿಸಲ್ಬರ್ಕ್ಕುಮೆ ಗೆಯ್ದ ಕರ್ಮಫಲಮಂ ಶ್ರೀ ಚಂದ್ರಚೂಡಾಮಣೀ    ೫೨

೫೨ ದೇಹವನ್ನು ಸ್ಪೂರ್ತಿಯಾಗಿ ತುಂಡುತುಂಡಾಗಿ ತುಂಡರಿಸಿದರೂ ಹಾಗೆ ಕಡಿದ ತುಂಡುಗಳನ್ನು ಮತ್ತೆ ಚೂರುಚೂರಾಗಿ ಕೊಯ್ದರೂ ಉಗ್ರವಾದ ಅಗ್ನಿಕುಂಡದಲ್ಲಿ ಕೆಡವಿದರೂ ಸಮುದ್ರವನ್ನು ಹೊಕ್ಕರೂ ಕಡೆಗೆ ಏನು ಮಾಡಿದರೂ ನಾವು ಗಳಿಸಿದ

1 ಕಡುಮೇಂ    2 ದಂ

ಕರ್ಮಫಲವನ್ನು ಯಾವ ಬಗೆಯಲ್ಲಾದರೂ ಅನುಭವಿಸದಲ್ಲದೆ ಅದನ್ನು ಕಳೆಯಲು ಬರುತ್ತದೆಯೇ? ಓ ಚಂದ್ರಚೂಡಾಮಣೀ.

ತಡಂಗಡಿ – ಪ್ರಾತಿರ್ಯವಾಗಿ ತುಂಡರಿಸು. ಉಗ್ರಾನಲ ಕುಂಡ–ಭಯಂಕರವಾದ ಅಗ್ನಿಕುಂಡ. ಗೆಯ್–ಮಾಡು.

ಪರಮಾರಾಧ್ಯರುಮಂ [1]ಪೊ'ರಟ್ಟಿಯುದು ಕರ್ಮಮುಪ್ಪೆನ್ನೊ-
ತ್ತರಿಸುತ್ತಿರ್ಪುದಿದಾವಚೋದ್ಯಮದು ತಾಂ ಗೆಲ್ಗುಂ ಭವೋದ್ಯೋಗ ತ-
ತ್ಪರನಾಗಿರ್ದ ವಿಷಾಪಹಾರಮಣಿಯಂ ಕಟ್ಟಿರ್ದವಂ ಗೆಲ್ವವೋಲ್
[2]ಗರಳಗ್ರಾಸದಿನಪ್ಪುದೊಂದು ವಿಷ[ಮಂ][2] ಶ್ರೀ ಚಂದ್ರಚೂಡಾಮಣೀ ೫೩

೫೩ ಕರ್ಮವು ಪರಮಪೂಜ್ಯರಾದವರನ್ನೂ (ಸಂಸಾರದಲ್ಲಿ) ಹೋರಾಡುವಂತೆ ಮಾಡಿದೆ. ಹೀಗಿರುವಾಗ ಕರ್ಮ ಸಾಮಾನ್ಯನಾದ ನನ್ನನ್ನು ಹಿಡಿಯುತ್ತಿರುವುದರಲ್ಲಿ ಆಶ್ಚರ್ಯವೇನು? ಆದರೂ ವಿಷವನ್ನು ಪರಿಹರಿಸುವ ಗರುಡಮಣಿಯನ್ನು ಕಟ್ಟಿಕೊಂಡಿರುವವನು ಹಾವಿನ ವಿಷವನ್ನು ಗೆದ್ದು ಪಾರಾಗುವಂತೆ ಈಶ್ವರಾರಾಧನೆಯಲ್ಲಿ ಮಗ್ನನಾಗಿರುವವನು (ಕರ್ಮವನ್ನು) ಗೆಲ್ಲಬಲ್ಲನು.

ಒತ್ತರಿಸು–ಹಿಡಿಸು, ತೊಂದರೆಪಡಿಸು. ಚೋದ್ಯ–ಆಶ್ಚರ್ಯ. ಭವ–ಸಂಸಾರ; ಈಶ್ವರ. ವಿಷಾಪಹಾರಮಣಿ–ಹಾವಿನ ವಿಷವನ್ನು ಹೀರಿಕೊಳ್ಳುವ ಒಂದು ಬಗೆಯ ರತ್ನ: ಗರುಡಮಣಿ. ಗರಳಗ್ರಾಸ–ವಿಷವ್ಯಾಪನೆ (ಗ್ರಾಸ–ತುತ್ತು, ಕವಳ, ಆಹಾರ)

ಕುರುಡಂ ಕಾಣದೆ ಬೀಳ್ವವೋಲ್ ಪಗಲೊಳಂ ಕಣ್ಣುಳ್ಳವಂ ಬೀಳ್ವನೇ
ಮರುಳಪ್ಪಂ ದೆಸೆಗೆಟ್ಟುಪೋಪ ತೆಱದಿಂ ಪೋಗ್ ಪೋಪನೇ ಬುದ್ಧಿ ತ-
ತ್ಪರನಜ್ಞಾನಿಗೆ ಕರ್ಮಮಂ ನೆಱಿಪಲಕ್ಕುಂ ಜ್ಞಾನಿ ಕರ್ಮಕ್ಕೆ ಮೆ-
ಯ್ದೆಱಲೇನಾರ್ಪನೆ ಕರ್ಮವಾರ್ಗೆ ಹಿತಮೋ ಶ್ರೀ ಚಂದ್ರಚೂಡಾಮಣೀ ೫೪

೫೪ ಹಗಲಿನಲ್ಲಿ ಕೂಡ ಕುರುಡನು ಕಣ್ಣು ಕಾಣದೆ(ಹಳ್ಳಕ್ಕೆ) ಬೀಳುವಹಾಗೆ ಕಣ್ಣುಳ್ಳವನು ಬೀಳುತ್ತಾನೆಯೇ? ಮರುಳು ಹಿಡಿದವನು (ಹುಚ್ಚ) ದಿಕ್ಕುಗೆಟ್ಟು ಅಲೆದಾಡುತ್ತ ಹೋಗುವ ಹಾಗೆ ಬುದ್ಧಿವಂತನು ಹೋಗುತ್ತಾನೆಯೇ? ಅಜ್ಞಾನಿಗೆ ಕರ್ಮಸಂಚಯ ಮಾಡಿಕೊಳ್ಳುವುದು ಸಾಧ್ಯ. ಕರ್ಮ ಭವಬಂಧನಕ್ಕೆ ಕಾರಣ ಎಂಬುವನ್ನು ಅಜ್ಞಾನಿ ಅರಿಯನು. ಜ್ಞಾನಿ ತನ್ನನ್ನು ತಾನು ಕರ್ಮಕ್ಕೆ ಒಡ್ಡಿಕೊಳ್ಳಲಾರನು. (ಅವನಿಗೆ ಕರ್ಮಸ್ವರೂಪ, ಅದರ ಫಲದ ವಿಚಾರ ತಿಳಿದಿರುವುದರಿಂದ). ಶ್ರೀ ಚಂದ್ರಚೂಡಾಮಣೀ, ಕರ್ಮ ಯಾರಿಗೆ ತಾನೆ ಹಿತವನ್ನುಂಟುಮಾಡುತ್ತದೆ?

ನೆಱಿಪು–ಒಟ್ಟುಗೂಡಿಸು, ಕೂಡಮಾಡು; ಸಂಚಯಿಸು. ಮೆಯ್ದೆಱು–ಮೈಗೊಡು.

1 ಪೆ (ಮ). 2 ಗರಳೋಗ್ರಾನಲಸಪ್ಪ ಕಯ್ದುಮಾನಮಂ (ಮ)

ಪಱಿವಂ ನಿಲ್ಲನೆ ವಾರ್ಧಿಯೊಳ್ ಮುಳುಗಿದಂ ಬೆಂಡೇಳನೇ ಸುಪ್ತ[1]ನೆ-
ಚ್ಚರನೇ[1] ಬೆಂಕೆಯೊಳಿರ್ದವಂ ನೆಳಲನೆಂತುಂ ಸೇರನೇ ಕರ್ಮಿಯುಂ-
ತಿರೆ ನಾನಾವಿಧ ಕರ್ಮದೊಳ್ ತೊಡರ್ದು ಮತ್ತಂಮತ್ತಮಾ ಕರ್ಮಮಂ
ನೆಱಪುತ್ತಿರ್ಪರದಾರುಮಿಲ್ಲ ಜಗದೊಳ್ ಶ್ರೀ ಚಂದ್ರಚೂಡಾಮಣೀ ೫೫

೫೫ ಓಡುವವನು ನಿಲ್ಲದೆ ಇರುತ್ತಾನೆಯೇ? ಸಮುದ್ರದಲ್ಲಿ ಮುಳುಗಿರುವವನು ಬೆಂಡಿನಂತೆ ಮೇಲಕ್ಕೆ ತೇಲಿಬರದೆ ಇರುತ್ತಾನೆಯೇ? ನಿದ್ರಿಸುವವನು ಎಚ್ಚರಗೊಳ್ಳದಿರುತ್ತಾನೆಯೇ? ಬಿಸಿಲ ಬೇಗೆಗೆ ಸಿಲುಕಿದವನು ನೆರಳನ್ನು ಆಶ್ರಯಿಸದೆ ಇರುತ್ತಾನೆಯೇ? ಅಂತೆಯೇ ಕರ್ಮಠನಾದವನು ಬಗೆಬಗೆಯ ಕರ್ಮಗಳಲ್ಲಿ ಸಿಲುಕಿಕೊಂಡಿದ್ದು, ಮತ್ತೆ ಮತ್ತೆ ಕರ್ಮರಾಶಿಯನ್ನು ಕೂಡಹಾಕಿಕೊಳ್ಳುತ್ತಿರುವವರು ಜಗತ್ತಿನಲ್ಲಿ ಯಾರೂ ಇಲ್ಲ, ಓ ಚಂದ್ರಚೂಡಾಮಣೀ.

ಪಱಿ–ಓಡು. ವಾರ್ಧಿ–ಸಮುದ್ರ. ಬೆಂಡೇಳು–ತೇಲು. ಸುಪ್ತಂ–ಮಲಗಿರುವವನು. ತೊಡರ್–ಸಿಕ್ಕಿಕೊ.

ಪೊಱೆ[2]ಯುಂ ಪೊತ್ತವಂ ಸಮಂತಿಳಿಪನ್ನಂ ವ್ಯಾಧಿತಂ ಕುತ್ತಮಂ
ಪಱಿವನ್ನಂ ಪಡಿಪಟ್ಟವಂ ಬಿಸುಡುವನ್ನಂ ಕಾಣ್ಬುದಂ ಕಾಣ್ಬನಂ
ಮಱುಗುತ್ತಿರ್ಪವೊಲಾಗಳುಂ ಮಱುಗನೇಡಾ ಕರ್ಮಿ ಕರ್ಮದ್ವಯಂ
ಪಱಿವನ್ನಂ ನಿಜಯೋಗವಜ್ರಹತಿಯಿಂ ಶ್ರೀ ಚಂದ್ರಚೂಡಾಮಣೀ ೫೬

೫೬ ಹೊರೆಯನ್ನು ಹೊತ್ತವನು ಅದನ್ನು ಇಳಿಸುವವರೆಗೂ, ರೋಗಪೀಡಿತನಾದವನು ರೋಗವನ್ನು ಹೋಗಲಾಡಿಸಿಕೊಳ್ಳುವವರೆಗೂ, ತೊಂದರೆಗೊಳಗಾದವನು ಅದನ್ನು ಪರಿಹರಿಸಿಕೊಳ್ಳುವವರೆಗೂ ಕಾಣಬೇಕಾದ ಪರಿಹಾರವನ್ನು ಕಾಣುವವರೆಗೂ ಕೊರಗುತ್ತಿರುವ ಹಾಗೆ, ಕರ್ಮಿಯು ತನ್ನ ಯೋಗವೆಂಬ ವಜ್ರಾಘಾತದಿಂದ ಪುಣ್ಯಪಾಪಕರ್ಮಗಳು ಚೆದರಿಹೋಗುವವರೆಗೂ ಯಾವಾಗಲೂ ಕೊರಗುತ್ತಿರಬೇಕಲ್ಲವೇ? ಶ್ರೀ ಚಂದ್ರಚೂಡಾಮಣೀ.

ಸಮಂತು–ಚೆನ್ನಾಗಿ. ವ್ಯಾಧಿತ–ರೋಗಿಷ್ಠ. ಕುತ್ತ–ರೋಗ. ಪಱಿ–ವಾಸಿಯಾಗು; ನಾಶವಾಗು. ಪಡಿಪಡು–ತೊಂದರೆ ಅನುಭವಿಸು. ಮಱುಗು–ಸಂಕಟಪಡು; ಕೊರಗಿನಿಂದ ಕುದ್ದುಹೋ. ಕರ್ಮದ್ವಯ–ಪುಣ್ಯಕರ್ಮ, ಪಾಪಕರ್ಮ. ವಜ್ರಹತಿ–ವಜ್ರಾಯುಧದ ಹೊಡೆತ.

---

1 ನೇಚ್ಚರನಂ 2 ಗು

ದೆಸೆಯಂ ಪೊಕ್ಕೊಡಮಾಗಸಕ್ಕಡರ್ದೊಡಂ ವಾರಾಶಿಯೊಳ್ಪಾಯ್ದೊಡಂ
ರಸೆಯೊಳ್ ಪೈಯ್ಗರೆದಿರ್ದೊಡಂ ನಿಮಿಷದಿಂ ದಾಳಿಯಿಟ್ಟು ಬಂದೆತ್ತಿ ಘಾ-
ತಿಸುಗುಂ ಮೃತ್ಯುವದೊಂದುಮಂ ಕಳೆಯಲಾರ್ಗಂ ಬಾರದೊಂದುಂಟು [1][ಶಿವಂ-
ದೊಸೆ][1]ದೀಶಾನ ಶರ[2][ಣ್ಯಮೆಂ][2]ಬ ಬಗೆ ತಾಂ ಶ್ರೀ ಚಂದ್ರಚೂಡಾಮಣೀ ೫೭

೫೭ ದಿಕ್ಕುಗಳನ್ನು ಹೊಕ್ಕು ಮೈಮರಸಿಕೊಂಡರೂ, ಆಕಾಶವನ್ನು ಏರಿದರೂ, ಸಮುದ್ರವನ್ನು ದಾಟಿಹೋದರೂ, ಭೂಮಿಯೊಳಗೆ ಮೈಮರಸಿಕೊಂಡಿದ್ದರೂ ಮೃತ್ಯು ಬಿಡದೆ ಒಂದು ನಿಮಿಷಮಾತ್ರದಲ್ಲಿ ಮುತ್ತಿಗೆ ಹಾಕಿ ಹೊಡೆದುಹಾಕುವುದು. ಅದನ್ನು ನಿವಾರಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಆದರೆ ಒಂದು ಉಪಾಯವಿದೆ ಅದೇನೆಂದರೆ: "ಎಲೈ, ಶಿವನೇ, ನೀನೇ ನನಗೆ ಆಸರೆ" ಎಂಬ ಮನಸ್ಸು, ಶ್ರೀ ಚಂದ್ರಚೂಡಾಮಣೀ.

ಅಡರ್–ಏರು. ವಾರಾಶಿ–ಸಮುದ್ರ. ರಸೆ–ಭೂಮಿ, ನೆಲ. ಪೈಗರೆ–ಮೈಮರಸಿಕೊ, ಮುಚ್ಚಿಟ್ಟುಕೊ. ದಾಳಿ–ಮುತ್ತಿಗೆ, ಆಕ್ರಮಣ ಘಾತಿಸು–ಪೆಟ್ಟುಕೊಡು. ಶರಣ್ಯ–ಆಶ್ರಯ, ಆಸರೆ.

ಸುರರಾಜಾದ್ರಿಯ ಬಿಣ್ಪಸಂಬುಧಿಯ ಗುಣ್ಪಂ ದಿಕ್ಸಮೂಹಂಗಳಂ-
ತರಮಂ ವ್ಯೋಮದ ಬಿಣ್ಪನೆಂತಱಿಯಲಕ್ಕುಂ ಮೃತ್ಯುವೆಯ್ತಂದು ಗೋ-
ಣ್ಮುಱಿಗೊಂಡೊಯ್ದಪುದಾಗಳೆಂದಱಿಯಲಾರ್ಗಂ ಬಾರದಾ ಮೃತ್ಯುಸಂ-
ಹರಣಕ್ಕೀಶ ನಿಜಾಂಘ್ರಿಯೊಂದೆ ಶರಣ ಶ್ರೀ ಚಂದ್ರಚೂಡಾಮಣೀ ೫೮

೫೮ ಮೇರುಪರ್ವತದ ಭಾರವನ್ನು, ಸಮುದ್ರದ ಆಳವನ್ನು, ದಿಕ್ಕುಗಳ ನಡುವಣ ಅಂತರವನ್ನು, ಆಕಾಶದ ವಿಸ್ತಾರವನ್ನು, ಹೇಗೆ ತಾನೆ ತಿಳಿಯಲು ಸಾಧ್ಯ? ಅದೇ ರೀತಿ, ಮೃತ್ಯು ಯಾವಾಗ ಬಂದು ಕೊರಳು ಕತ್ತರಿಸಿಹೋಗುವುದು ಎಂಬುದನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಆ ಮೃತ್ಯುವನ್ನು ಸಂಹಾರ ಮಾಡಲು (ಎಂದರೆ ನಿವಾರಿಸಿಕೊಳ್ಳಲು), ಎಲೈ ಈಶ್ವರನೇ, ನಿನ್ನ ಅಡಿಯೊಂದೇ ಆಸರೆ.

ಸುರರಾಜಾದ್ರಿ–ಇಂದ್ರನು ವಾಸವಾಗಿರುವ ಪರ್ವತ, ಮೇರುಪರ್ವತ. ಬಿಣ್ಪು–ಭಾರ, ಹಿರಿಮೆ. ಗುಣ್ಪು–ಆಳ. ಅಂತರ–ತೆರಪು. ವ್ಯೋಮ–ಆಕಾಶ. ಅಂಘ್ರಿ–ಪಾದ, ಅಡಿ.

ನೆರವಿಲ್ಲಿಯ್ದಿಪರಿಲ್ಲ ಕಾಪವರುಮಿಲ್ಲಾರುಂ ಭವಾರಾತಿಗಂ
ನೆರಮಾಗಲ್ಕದಿಗೆಯ್ದಿಸಲ್ ನೆಱೆಯೆ ತಾಂ ಸಾಮರ್ಥ್ಯರಿಲ್ಲಿಂದುಶೇ-
ಖರನೆಂದಾಂ ಶರಣಾರ್ಥಿಯಾಗಿ ಮಱೆಯಂ ಪೊಕ್ಕೆಂ ದಿಟಂ ಜನ್ಮಸಾ-
ಗರದಿಂದಂ ಪೊಱಗಿಕ್ಕು ನೀಂ ಕರುಣದಿಂ ಶ್ರೀ ಚಂದ್ರಚೂಡಾಮಣೀ ೫೯

1 ಮಣಿಸ 2 ಣಾವಂ

೫೯ (ಒಳ್ಳೆಯ ಬದುಕು ಬಾಳಲು) ಯಾರ ಸಹಾಯವೂ ಇಲ್ಲ, (ಮುಂದಕ್ಕೆ, ದಡಕ್ಕೆ) ಕರೆದೊಯ್ಯುವವರಿಲ್ಲ, ಕಾಪಾಡುವವರು ಇಲ್ಲ; ಹುಟ್ಟುಸಾವುಗಳನ್ನು ಕೊನೆಗಾಣಿಸಬೇಕೆನ್ನುವವನಿಗೆ ನೆರವಾಗಲು, ಗುರಿಮುಟ್ಟಿಸಲು (ಮೋಕ್ಷವನ್ನು ಪಡೆಯಲು) ಪೂರ್ಣವಾಗಿ ಸಮರ್ಥರಾದವರು (ಎಂದರೆ, ಗುರು?) ಇಲ್ಲ; ಚಂದ್ರಮೌಳಿಯೇ ನನಗೆ ಶರಣು ಎಂದು ಶರಣಾರ್ಥಿಯಾಗಿ ನಿನ್ನ ಮರೆಹೊಕ್ಕಿದ್ದೇನೆ. ಹೇ, ಚಂದ್ರಚೂಡಾಮಣಿಯೆ, ನೀನು ಕರುಣೆಯಿಂದ ಈ ಹುಟ್ಟು ಎಂಬ ಸಮುದ್ರದಿಂದ ನನ್ನನ್ನು ಹೊರಗೆ ಹಾಕು.

ಭವಾರಾತಿ–ಜನ್ಮ (ಸಂಸಾರ) ಶತ್ರು. ನೆಜಿಯೆ–ಸಂಪೂರ್ಣವಾಗಿ, ಚೆನ್ನಾಗಿ.

ಪಿತೃವಿಂದೋವನೆ ಮಾತೃಮಾಣಿಪಳೆ ಮಿತ್ರಂ ನಿಂದು ಮಾರ್ಮಲೆವನೇ
ಸುತನೇಂ ಕಾದಪನೆಂಬನೇ ಯಮಭುಜಂಗಂ ಪ್ರಾಣ[1][ಭುಕ್ಪ್ರಾ][1]ಣಮಾ-
ರುತಮಂ ಪೀರ್ವೆಡೆಯೊಳ್ ತದೀಯ ಜನಿತೋಗ್ರಾನರ್ಥದಿಂ ಕಾಯಲ-
ಚ್ಯುತ ನೀನಾರ್ಪೆ ಶರಣ್ಯನೆಂಬ ಜನಮಂ ಶ್ರೀ ಚಂದ್ರಚೂಡಾಮಣೀ ೬೦

೬೦ ಪ್ರಾಣಭಕ್ಷಕನಾದ ಯಮನೆಂಬ ಸರ್ಪ ಪ್ರಾಣವಾಯುವನ್ನು ಹೀರುವ ಸಂದರ್ಭದಲ್ಲಿ, ತಂದೆ ಇಂದು ಕಾಪಾಡುವನೆ? ತಾಯಿ ಬಿಡಿಸಬಲ್ಲಳೆ? ಗೆಳೆಯ ಎದುರು ನಿಂತು ಪ್ರತಿಭಟಿಸುವನೆ? ಮಗನು ಕಾಪಾಡಬಲ್ಲವನೆ? ಎಲೈ ನಾಶವಿಲ್ಲದವನೇ, ಚಂದ್ರಚೂಡಾಮಣಿಯೆ, ಯಮಸರ್ಪನಿಂದ ಉಂಟಾಗುವ ಭಯಂಕರವಾದ ಅನರ್ಥದಿಂದ ಮರೆಹೊಕ್ಕ ಜನವನ್ನು ಕಾಪಾಡಲು ನೀನು ಮಾತ್ರ ಸಮರ್ಥನಾಗಿದ್ದೀಯೆ.

ಮಾಣ್–ಬಿಡು. ಮಾರ್ಮಲೆ–ಪ್ರತಿಭಟಿಸು. ಭುಜಂಗ–ಸರ್ಪ. ಪ್ರಾಣಭುಕ್–ಪ್ರಾಣವನ್ನು ಭುಂಜಿಸುವ. ಪ್ರಾಣಮಾರುತ–ಪ್ರಾಣವಾಯು. ಉಗ್ರ–ಭಯಂಕರ. ಅಚ್ಯುತ–ನಾಶವಿಲ್ಲದವನು (ಇದು ವಿಷ್ಣುವಿನ ನಾಮಾಂತರ ಕೂಡ.)

ಕರಿಯಿರ್ದಂತೆ ಚತುರ್ತುರಂಗಮಿರ್ದಂತಾಪ್ತರಿರ್ದಂತೆ ಕಿಂ-
ಕರರಿರ್ದಂತೆ ಕೃತಾಂತನಾರ್ದು ಬಿಗಿದುಕೊಂಡೊಯ್ಯಲಾಗಳ್ ರಕ್ಷಿಗಾ-
ರ್ಶರಣಾರ್ಬರಿಪರಾರೊ ನಿಮ್ಮ ದಯೆಯಿಂ ನೀಂ ಪೊರ್ಟಿಸಲ್ಬಲ್ಲೆ ನಿಂ-
ತಡಿಸಲ್ ನಿಲ್ವನಗಲ್ಚಿ ತಾನಸಲ್ವನೈ ಶ್ರೀ ಚಂದ್ರಚೂಡಾಮಣೀ ೬೧

೬೧ (ಚಕ್ರವರ್ತಿಗೆ) ಗಜಸೈನ್ಯವಿದೆ; ಕಾಲಾಳುಗಳಿದ್ದಾರೆ; ಅಶ್ವಸೈನ್ಯವಿದೆ; ಆಪ್ತವರ್ಗವಿದೆ; ಸೇವಕರಿದ್ದಾರೆ. ಇವರೆಲ್ಲರೂ ಇರುವಾಗಲೂ ಯಮರಾಯ

1 ಯುಗ್ಮಾ 2 ಳ

ಆರ್ಭಟಿಸುತ್ತ ಎಳೆದುಕೊಂಡು ಹೋಗುವಾಗ ಆ ಚಕ್ರವರ್ತಿಗೆ ಕೂಡ ಆಶ್ರಯ ಕೊಡುವವರು ಯಾರು? ಆತನನ್ನು ಕಾಪಾಡುವವರು ಯಾರು? ನೀನು ಕರುಣೆಯಿಂದ ಹುಟ್ಟಿಸಿದರೆ ಹುಟ್ಟುವನು; (ಅವನು ಇರಬೇಕೆಂದು) ನೀನು ನಿಶ್ಚಯಿಸಿದರೆ ಇರುವನು; (ಈ ಪ್ರಪಂಚದಿಂದ) ಅಗಲಿಸಿದರೆ ತಾನು ಅಗಲಿಹೋಗುತ್ತಾನೆ.

ಕರಿ–ಆನೆ. ಚರ–ಚರಿಸುವವನು; ಪದಾತಿ ಸೈನ್ಯ(?), ಕಾಲಾಳು(?). ತುರಂಗದಳ–ಕುದುರೆಸೈನ್ಯ. ಕಿಂಕರ–ಸೇವಕ. ಕೃತಾಂತ–ಯಮ. ಆರ್–ಗರ್ಜಿಸು, ಗಟ್ಟಿಯಾಗಿ ಕೂಗು; ಆರ್ಭಟ ಮಾಡು. ಚಕ್ರಿ–ಚಕ್ರವರ್ತಿ. ಕಾಪರ್–ಕಾಪಾಡುವವರು.

ಉದಬಿಂದುದ್ವಯ[1]ಮುಂ[1] ವಧೂಜಠರದೊಳ್ ಪೊಕ್ಕಾಗಳೊ ರೂಪಾಗಿ ಮಾ-
ಡಿದರಂದಾಯವಯವಂ ಸ್ವಭಾವಮೆನಲೇಕಾಕಾರಮೇಕಾಗದೇ-
ಕದು ನಾನಾ ವಿಧಮಾದುವಂತೆರಡು ಮತ್ತೀ ತತ್ತ್ವದೀಯಿಚ್ಛೆಯಿಂ-
ದುದಯಿಕ್ಕುಂ ತನುಭೃದ್ಘನಕ್ಕೆ[ನೆ][1]ಘನಂ ಶ್ರೀ ಚಂದ್ರಚೂಡಾಮಣೀ ೬೨

೬೨ ಜಲಬಿಂದುಗಳೆರಡೂ ವಧುವಿನ ಬಸಿರಿನಲ್ಲಿ ಹೊಕ್ಕಾಗ ಅದನ್ನು ರೂಪವುಳ್ಳದ್ದಾಗಿ ಮಾಡಿದವರು ಯಾರೋ? ಅಂದು ಆ ಬಿಂದುದ್ವಯ ಒಂದಾಗಿ ಕೂಡಿಕೊಂಡಿದ್ದ ಅವಯವ ತನ್ನ ಸ್ವಭಾವಕ್ಕನುಗುಣವಾಗಿ (ಒಂದಾಗಿದ್ದುದು ಒಂದೇ ಆಗಿ ಉಳಿಯುವುದು ಅದರ ಸ್ವ-ಭಾವ) ಒಂದೇ ಆಕಾರವಾಗಿ ಏಕೆ ಉಳಿಯಲಿಲ್ಲ? ಆ ಎರಡು ಏಕೆ ನಾನಾ ವಿಧವಾದುವು? ಈ ತತ್ತ್ವದ ಇಚ್ಛೆಯಿಂದ (ಸೃಷ್ಟಿಪೂರ್ವದಲ್ಲಿ ಏಕವಾಗಿದ್ದ ಬ್ರಹ್ಮವಸ್ತು ಅನೇಕವಾಗಲು ಇಚ್ಛಿಸಿದ ಅದೇ ಇಚ್ಛೆಯಿಂದ) ದೇಹವನ್ನು ಧರಿಸುವ ಘನಕ್ಕೆ ಘನ (ಆತ್ಮ, ಜೀವಾತ್ಮ) ಹುಟ್ಟುವುದು. [ಪುರುಷನ ರೇತಸ್ಸಿನ ಬಿಂದುವೂ ಸ್ತ್ರೀಯ ರಜಸ್ಸಿನ ಬಿಂದುವೂ ಕೂಡಿದಾಗ ಎರಡು ಬಿಂದುಗಳು ಕೂಡಿ ಒಂದು ಬಿಂದುವಾಗಿ, ಬಿಂದುವಾಗಿಯೇ ಉಳಿಯುವುದಿಲ್ಲ. ಅದರಲ್ಲಿ ಜೀವಾತ್ಮ (ಪರಮಾತ್ಮನ ಅಂಶ) ಸೇರಿಕೊಂಡು ಅದರ ಇಚ್ಛೆಯಿಂದ ಒಂದು ಅನೇಕ ಅವಯವಗಳೊಡನೆ ಶಿಶುರೂಪವನ್ನು ಧರಿಸುತ್ತದೆ] (?)

ಉದಬಿಂದುದ್ವಯ–ದ್ರವರೂಪದ ಪುರುಷರೇತೋಬಿಂದು, ಸ್ತ್ರೀಯ ರಜೋಬಿಂದು. ತನುಭೃತ್–ದೇಹವನ್ನು ಧರಿಸಿರುವ ದೇಹಿ ಅಥವಾ ಜೀವಾತ್ಮ. ವಧೂ–ಕನ್ಯೆ. ತತ್ತ್ವ–ಆತ್ಮತತ್ತ್ವ ಅಥವಾ ಬ್ರಹ್ಮತತ್ತ್ವ. ಘನಕ್ಕೆ ಘನ–ಆತ್ಮತತ್ತ್ವ.

ತನುಭೃಜ್ಜಂಜನಿತಕ್ಕೆ ಮಾತೃಪಿತೃರೂಪಾಗಂ ಕ್ಷೇತ್ರಬೀಜಾದಿಯಿಂ-
ಬ ನಿ[2]ಜಂ ಸೂತಿಗೆ ವೃದ್ಧಿಯಾದುದುದೀ ಸಾಮ್ರಾಜ್ಯಕ್ಕೆ ಸೌಖ್ಯಕ್ಕೆ ಪಾ-
ಲನ ಧರ್ಮಾರ್ಜನೆಗುಂ ಕರ್ಮನಿಯಾಮಕಕ್ಕೆ ಸರ್ವೇಶ ನೀ-
ನೆ ನಿಮಿತ್ತಂ ಪೆರದಾರುಮಿಲ್ಲ ಜಗದೊಳ್ ಶ್ರೀ ಚಂದ್ರಚೂಡಾಮಣೀ ೬೩

---

1 ಮುಂ 2 ಪ

ತಾನು ಪ್ರೀತಿಸಿದಂತೆ ಬಾಳುವುದು ತಾನು ಮೆಚ್ಚಿಕೊಂಡದ್ದೇ? ಸುಖದುಃಖಗಳು ತಾನು ಇಷ್ಟಪಟ್ಟು ಪಡೆದ ಫಲವೇ? ಜೀವನ (ಜೀವಾತ್ಮನ) ದೇಹದ ಅವಸಾನ (ನಾಶ) ತನ್ನ ವಶದಲ್ಲಿಯೇ? ಓ ಚಂದ್ರಚೂಡಾಮಣೀ, ನೀನು ಹುಟ್ಟಿಸಿದರೆ ಹುಟ್ಟುತ್ತಾರೆ, ಜೀವನವಲ್ಲಿ ನೆಲೆಯಾಗಿ ನಿಲ್ಲಿಸಿದರೆ ನಿಲ್ಲುತ್ತಾರೆ, ಅಗಲಿಸಿದರೆ ಅಗಲುತ್ತಾರೆ.

ಗರ್ಭಸಂಕ್ರಮಣ – ಗರ್ಭಶಿಶುಜನನ (ಸಂಕ್ರಮಣ – ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹಾಯುವುದು, ದಾಟುವುದು). ಸ್ವಾಯತ್ತ–ಸ್ವಾಧೀನ. ಅಭೀಷ್ಟಾರ್ಥ– ಇಷ್ಟಾರ್ಥ; ಬಯಸಿದ ಫಲ, ಪ್ರಯೋಜನ. ದೇಹಿ–ದೇಹವನ್ನು ಪಡೆದಿರುವ ಆತ್ಮ.

[1][ಮ][1]ತಿ ಪೇಳ್ದಂತಿರೆ ಕರ್ಮಕಾಂಡವಮು[ದ೯ಂತೆ][2] ಜ್ಞಾನಕಾಂಡಂಗಳಿಂ
ಕೃತಕರ್ಮ ಪ್ರ+ಭವಾನುರೂಪಫಲಮಂ ನೀಂ ಮಾಳ್ಪೆ ತತ್ಕರ್ಮಿಗ-
ಚ್ಯುತ ಮೋಕ್ಷಾರ್ಥಿಗೆ ಮುಕ್ತಿಯಂ ಕೊಡು[3]ವೆ[3] ನಿನ್ನಂ ನಂಬದಂಗೀವೆ ದು-
ರ್ಗತಿಯಂ ದೇಹಿಗೆ ತನ್ನ ಮೆಚ್ಚಿದರೊಳ್ ಶ್ರೀ ಚಂದ್ರಚೂಡಾಮಣೀ ೬೬

೬೬ ಮೋಕ್ಷಾರ್ಥಿಯಾದ ಬುದ್ಧಿವಂತನು ಕರ್ಮಕಾಂಡಕ್ಕೆ ವಶನಾಗದೆ ಜ್ಞಾನಕಾಂಡಕ್ಕೆ ಪ್ರಾಧಾನ್ಯ ಕೊಡುತ್ತಾನೆ. ಆತ್ಮಜ್ಞಾನಿ ಮಾಡುವ ಕರ್ಮಗಳೆಲ್ಲವೂ ಚಿತ್ತಶುದ್ಧಿಗಾಗಿ. ಅವನು ಮಾಡುವ ಕರ್ಮಗಳಿಗೆ ಅನುರೂಪನಾದ ಫಲವನ್ನು ನೀನು ಕೊಡುತ್ತೀಯೆ. ಎಲೈ ಅಚ್ಯುತ (ನಾಶರಹಿತನೆ), ಅವನು ಕರ್ಮಗಳನ್ನು ಮಾಡಿದವನಾದರೂ ಕೂಡ, ಮೋಕ್ಷವನ್ನು ಬಯಸುವ ಅವನಿಗೆ ನೀನು ಮುಕ್ತಿಯನ್ನು ಕೊಡುತ್ತೀಯೆ. ನಿನ್ನನ್ನು ನಂಬದವನಿಗೆ ನೀನು ದುರ್ಗತಿಯನ್ನು ಕೊಡುವೆ. ಆತ್ಮನಿಗೆ ಕರ್ಮ, ಜ್ಞಾನ ಇವೆರಡರಲ್ಲಿಯೂ ಮೆಚ್ಚಿಗೆ. (ಯಜ್ಞ, ಯಾಗ, ಜಪ, ತಪ, ಮುಂತಾದ ಕರ್ಮಾಚರಣೆಯಿಂದ ಸ್ವರ್ಗಪ್ರಾಪ್ತಿ ಮುಂತಾದ ಸದ್ಗತಿ ದೊರಕಬಹುದೇ ಹೊರತು ಮೋಕ್ಷಪ್ರಾಪ್ತಿಯಾಗದು.) ಜ್ಞಾನಿಯು ಕರ್ಮಮಾಡಿದರೂ ಮಾಡಿದಹಾಗಲ್ಲ. ಅವನ ಗುರಿ ಮೋಕ್ಷ. ಕರ್ಮಠನಿಗೆ ಕರ್ಮಫಲವಷ್ಟೇ ಅಪೇಕ್ಷಣೀಯ, ಮೋಕ್ಷವಲ್ಲ.

ಕರ್ಮಕಾಂಡ – ಯಜ್ಞಯಜನಗಳ ಅನುಷ್ಠಾನಕ್ಕೆ ಸಂಬಂಧಪಟ್ಟ ವೇದಭಾಗ. ಜ್ಞಾನಕಾಂಡ – ಬ್ರಹ್ಮಜ್ಞಾನವನ್ನು ತಿಳಿಸಿಕೊಡುವ ವೇದಭಾಗ. ಪ್ರಭವ – ಹುಟ್ಟುವ, ಉಂಟಾಗುವ.

ನಿನಗಾರ್ ಕರ್ಮಿಯು ಕರ್ಮಬಂಧನಕೃತಂ ದಾನಾರ್ಥಮಾಗಿರ್ದೊಡಂ-
ತೆನೆ ತಾಂ ಮೃ[4][ದ್ಧ][1]ರಚಕ್ರದಂಡ ನಿವಹಂಗಳ್ ಕುಂಭಕಾರಂಗೆ ಸಾ-
ಧನಮೆಂತಂತಿರೆ ಕರ್ಮಿಗೀವ ತೆಱದಿಂ ಕರ್ಮೇತರಂಗೀವ ನೆ-
ಟ್ಟನೆ ಕರ್ಮಪದಾನುರೂಪಮಂ[5][ಫಲಮಂ][5] ಶ್ರೀ ಚಂದ್ರಚೂಡಾಮಣೀ ೬೭

---

1 ಸ 2 ದಂತ +ಭಾ 3 ವ 4 ದ್ವ 5 ಫಲ

೬೭ ನಿನಗೆ ಕರ್ಮಫಲವನ್ನು ಕೊಡುವವರು ಯಾರು? ಕರ್ಮಾಚರಣೆ ಮಾಡುವವನು ಕರ್ಮಫಲದ ಬಂಧನಕ್ಕೆ ಒಳಗಾಗುವನು. ಈ ಕರ್ಮಫಲ ದಾನಮಾಡುವುದಕ್ಕಾಗಿಯೇ ಇರತಕ್ಕದ್ದು. ಹೇಗೆಂದರೆ, ಜೇಡಿಮಣ್ಣನ್ನು ಹೊತ್ತು ತಿರುಗುವ ಚಕ್ರದ ಅರೆಕಾಲುಗಳು ಕುಂಬಾರನಿಗೆ ಹೇಗೆ ಸಾಧನವೋ ಹಾಗೆ. (ಕುಂಬಾರನ ಕರ್ಮಫಲವಾದ ಮಡಕೆ ತನಗಾಗಿ ಮಾಡಿದ್ದಲ್ಲ; ಇತರರಿಗೆ ಕೊಡಲು ಮಾಡಿದ್ದು. ಕರ್ಮಫಲದ ಅನುಭೋಗ ಅವನಿಗಿಲ್ಲ. ಹಾಗೆಯೇ, ಕರ್ಮಮಾಡುವವನು ತನ್ನ ಕರ್ಮಫಲವನ್ನು ತ್ಯಾಗಮಾಡಬೇಕು). ಕರ್ಮಫಲವನ್ನು ನೀಡುವವನು (ಈಶ್ವರ) ಕರ್ಮಮಾಡುವ ಕರ್ಮಿಗೆ ಹೇಗೆ ಅದನ್ನು ನೀಡುವನೋ ಹಾಗೆ ಕರ್ಮಮಾಡದ ಅಥವಾ ಕರ್ಮಾಚರಣೆಯಲ್ಲಿ ನಿಸ್ಸಂಗನಾಗಿರುವ) ಜ್ಞಾನಿಗೂ ಒಂದೇ ಸಮನಾಗಿ ಕರ್ಮಸ್ವರೂಪಕ್ಕೆ ಅನುರೂಪವಾದ ಫಲವನ್ನು ನೀಡುವನು.

ಮೃದ್ಧರ (ಮೃದ್ + ಧರ)-ಜೇಡಿಮಣ್ಣನ್ನು ಹೊತ್ತಿರುವ, ಚಕ್ರದಂಡ-ಚಕ್ರದ ಅರೆಕಾಲು. ನಿವಹ-ಸಮೂಹ. ಕರ್ಮೇತರ-ಕರ್ಮಾಚರಣೆಯಿಂದ ಹೊರಗಿರುವವನು; ನಿಷ್ಕರ್ಮಿ.

ಇದು ಬಂಧಕ್ಕಿದು ಮುಕ್ತಿಗೆಂಬೆರಡುಮುಂ ವೇದಾಂತ ಸಿದ್ಧಾಂತದೊಳ್
ವಿದಿತಂಮಾಡಿದ ಕರ್ಮಯೋಗಗತಿಯಿಂ ನಿಂದಿರ್ದು ಬಾಗುರ್ತ್ತ[1][ಪ್ರೊ][1]-
ಡ್ಡಿದೆ ಯಿಂ ಸಂದದರೊಳ್ ಮನಂ ಮರಳಿ ಬೀಳ್ಗುಂ ಬುದ್ಧಿಯುಳ್ಳಂ ತೊಡಂ-
ಕದೆ ಪೋಕುಂ[2][ತೆ][2]ಸಗಿಷ್ಟ[3][ಯಂಗ][3]ಗೆಲ್ಪುದೇಂ ಶ್ರೀ ಚಂದ್ರಚೂಡಾಮಣೀ ೬೮

೬೮ ಈ ಕರ್ಮ (ಸಕಾಮಕರ್ಮ) ಸಂಸಾರಬಂಧನಕ್ಕೆ ಕಾರಣವಾದದ್ದು, ಈ ಕರ್ಮ (ನಿಷ್ಕಾಮಕರ್ಮ) ಮುಕ್ತಿಯನ್ನು ಕೊಡತಕ್ಕದ್ದು ಎಂಬ ಎರಡು ಬಗೆಯ ಕರ್ಮವಿಚಾರಗಳನ್ನೂ ವೇದಾಂತಸಿದ್ಧಾಂತದಲ್ಲಿ ತಿಳಿಯಪಡಿಸಿದೆ. ಕರ್ಮ-ಯೋಗಮಾರ್ಗದಲ್ಲಿ ನಾನು ನೆಲೆನಿಂತು ಸಂಸಾರಬಂಧನವೆಂಬ ರೋಗವನ್ನು ಒಡ್ಡಿಕೊಂಡೆ. ಇನ್ನು ಮನಸ್ಸು ಮತ್ತೆ ಅದರಲ್ಲಿಯೆ ಸೇರಿಕೊಂಡು ಬೀಳುತ್ತದೆ. ಬುದ್ಧಿಯುಳ್ಳವನು (ಆ ಮಾರ್ಗದಲ್ಲಿ) ಸಿಲುಕಿಕೊಳ್ಳದೆ ಇರುತ್ತಾನೆ. ಹಾಗೆ ಕರ್ಮಮಾಡಿ ಇಷ್ಟಾರ್ಥವನ್ನು ಗಳಿಸುವುದೇನಿದೆ?

ವಿದಿತಂ ಮಾಡು-ತಿಳಿಯುವಂತೆ ಮಾಡು, ತಿಳಿಯಪಡಿಸು. ಗತಿ-ಗಮನ, (ಒಂದು ಮಾರ್ಗದಲ್ಲಿ) ನಡೆಯುವುದು. ಬಾಗುರ್ತ್ತ (ಬಾಳ್ + ಕುತ್ತ > ಬಾರ್‌ಗುತ್ತ)-ಬದುಕು, ಸಂಸಾರ, ಎಂಬ ರೋಗ, ಕೋಟಲೆ; ಭವರೋಗ. ಒಡ್ಡು-ಇದಿರಿಡು, ಎದುರು ನಿಲ್ಲಿಸು. ಇಂ-ಇನ್ನು. ಸಲ್-ಸೇರು, ಹೊಂದಿಕೊ. ತೊಡಂಕು-ಸಿಲುಕಿಕೊಳ್ಳು. ಗೆಲ್ಪು-ಗಳಿಸು, ಸಂಪಾದಿಸು.

---

1 ನೊ 2 ತ 3 ಯಂಗ

ಸಕಲಾವಸ್ಥೆಯನಪ್ಪುಕೆಯ್ದು ನಿಜ ಪೂಜಾಭಕ್ತಿ[1][ಯಿಂ][1] ವೈಭವಾ-
ಧಿಕನೆಂ[2][ದುಂ][2] ನಿಜ ನಿಷ್ಕಳಾಸ್ಪದಮನತ್ಯಾಸಂದದಿಂ ಧ್ಯಾಸಿಸಲ್
ಸಕಲಜ್ಞಾನಮನಾತ್ಮಸಕ್ಕುಮೆರಡಕ್ಕುಂ ನೀನೆ ಹಸ್ತಾವಳಂ-
ಬಕನಾಗಿರ್ದಪೆ ಶಾಶ್ವತಪ್ರ[3][ಮಿ][3]ತಿಯಿಂ ಶ್ರೀ ಚಂದ್ರಚೂಡಾಮಣೀ ೬೯

೬೯ ಈಶ್ವರೀಶಕ್ತಿ ಕಳಾಸಹಿತವಾದ ಸಗುಣಬ್ರಹ್ಮೋಪಾಸನೆಯನ್ನು ಒಪ್ಪಿಕೊಂಡು ನಿಜವಾದ ಅನನ್ಯಭಕ್ತಿಯಿಂದ (ನಿನ್ನನ್ನು) ಆರಾಧನೆಮಾಡಿದರೆ (ನಿನ್ನ ಪ್ರಸಾದ ರೂಪದ) ಸಕಲ ವೈಭವಗಳಿಂದ ಕೂಡಿದವನಾಗಿ ನಾನು ಶ್ರೀಪ್ಮನೆನಿಸುತ್ತೇನೆ; ನಿಜವಾಗಿ ನಿಷ್ಕಳ, ಕೇವಲ ಚೈತನ್ಯ, ನಿರ್ಗುಣ, ಎನ್ನಿಸಿದ (ನಿನ್ನನ್ನು) ಅತ್ಯಾಸಂದ ದಿಂದ ಧ್ಯಾನಮಾಡಿದರೆ ಸ-ಕಲಾತ್ಮಕವಾದ ಜ್ಞಾನವು ಅನಾತ್ಮ, ಎಂದಾಗುವುದು, ಶಾಶ್ವತವಾದ ವೇದಪ್ರಮಾಣದಿಂದ ಸಗುಣೋಪಾಸನೆ ನಿರ್ಗುಣೋಪಾಸನೆ, ಈ ಎರಡಕ್ಕೂ ನೀನೇ ಕೈಸೆರವಾಗಿರುವೆ, ಓ ಚಂದ್ರಚೂಡಾಮಣೀ.

ಸಕಲಾವಸ್ಥೆ–ಮೂರ್ತತ್ವವನ್ನು ತಳೆಯಬಲ್ಲ ಈಶ್ವರನ ಕಲೆ ಅಥವಾ ಶಕ್ತಿಯ ಸ್ಥಿತಿ; ಸಗುಣತ್ವ. ಅಪ್ಪುಕೆಯ್‌-ಅಂಗೀಕರಿಸು, ಒಪ್ಪಿಕೊ. ನಿಷ್ಕಳಾಸ್ಪದಂ–ಚೈತನ್ಯಕ್ಕೆ, ಅಮೂರ್ತತ್ವಕ್ಕೆ, ನಿರಾಕಾರ ನಿರ್ಗುಣತ್ವಕ್ಕೆ ನೆಲೆಯಾದವನು; ನಿರ್ಗುಣಬ್ರಹ್ಮ. ಹಸ್ತಾವಳಂಬ–ಕರಾವಲಂಬ, ಕೈಯ ಆಸರೆ, ಕೈಸೆರವು. ಶಾಶ್ವತಪ್ರಮಿತಿ–ಶಾಶ್ವತವಾಗಿ ಊರ್ಜಿತವಾಗುವ ಪ್ರಮಾಣ; ಶ್ರುತಿವಾಕ್ಯ, ವೇದದ ಪ್ರಮಾಣ.

ಸಕಳೈಕಾತ್ಮಕನಪ್ಪೆಯಲ್ಲಮಖಿಳಾತ್ಮಾವಸ್ಥೆಯಿಂ ವಾರ್ಧಿವಾ-
ರಿಕಣಂ ಪಂಕಜಪತ್ರದೊಳ್ ನೆಲಸಿ ನೀರಂ ಪೊರ್ದದಿರ್ಪಂತೆ ಜೀ-
ವಕೃತವ್ಯಾಪ್ತಿಗೆ ಸಾಕ್ಷಿ ನೀಂ ಭವ ಭವತ್ಸಾನ್ನಿಧ್ಯದೊಳ್ ಜೀವಿತಾ-
ತ್ಮಕನೋರಂತಜಳಿಗುಂ ಸಮಂತುಱಿವುದಂ ಶ್ರೀ ಚಂದ್ರಚೂಡಾಮಣೀ ೭೦

೭೦ ಸಮುದ್ರದ ನೀರಿನ ಕಣ (ಹನಿ) ತಾವರೆ ಎಲೆಯಮೇಲೆ ನೆಲಸಿದ್ದರೂ ಸಮುದ್ರದ ನೀರಿನೊಂದಿಗೆ ಸಂಪರ್ಕ ಕಡಿದುಕೊಂಡು ಬೇರೆಯಾಗಿಯೇ ಉಳಿದಿರುತ್ತದೆ. ಎಲ್ಲ ಜೀವಾತ್ಮರ ಪ್ರತ್ಯೇಕ ಅವಸ್ಥಿತಿಯಿಂದಾಗಿ ನೀನು ಸಕಲ ಜೀವಾತ್ಮಕನಾಗಿದ್ದರೂ ಜೀವರ ಕರ್ಮವ್ಯಾಪ್ತಿಗೆ ಒಳಪಡದೆ ಸಾಕ್ಷೀಭೂತನಾಗಿರುವೆ. ಎಲೈ ಭವನೆ (ಈಶ್ವರನೆ), ನಿನ್ನ ಸಾನ್ನಿಧ್ಯದಲ್ಲಿ ಜೀವಾತ್ಮನು ತಾನು ಬೇರೆಯಾಗಿ ಉಳಿದಿರುವುದನ್ನು ಅರಿಯುವನು.

ಸಕಳೈಕಾತ್ಮಕ (ಸಕಲ + ಏಕಾತ್ಮಕ) – ಸಕಲವನ್ನು ಏಕಾತ್ಮವಾಗಿ ಉಳ್ಳವನು. ಅಖಿಳಾತ್ಮಾವಸ್ಥೆ–ಎಲ್ಲ ಜೀವಾತ್ಮರ ಸ್ಥಿತಿ. ವಾರ್ಧಿ-ಸಮುದ್ರ. ವಾರಿಕಣ–ನೀರಿನ ಹನಿ. ಪಂಕಜಪತ್ರ-ತಾವರೆಎಲೆ. ಪೊರ್ದು–ಹೊದ್ದು, ಸೇರು, ಕೂಡು. ಭವ–ಈಶ್ವರ, ಶಿವ.

---

1 ಯಂ 2 ದಂ 3 ಮ

ಭವತ್ಸಾನ್ನಿಧ್ಯ–ನಿನ್ನ ಬಳಿ ಇರುವುದು, ನಿನ್ನ ಸಾಮೀಪ್ಯ. ಜೀವಿತಾತ್ಮಕ–ಜೀವಾತ್ಮ. ಓರಂತೆ–ಚೆನ್ನಾಗಿ; ಆ ರೀತಿ, ಒಂದೇ ರೀತಿ.

ತಿಳಿದಾತ್ಮಪ್ರಕೃತಿಸ್ವಭಾವಮನ[1][ದನಾನ]ಲ್ಲೆಂದು ನಿ[2][ಶ್ಚೈ]ಸಿ ನಿ-
ಶ್ಚಲದಿಂ ದೇಹದ ಮೋಹಮಂ ಬಿಸುಟು ತತ್ತ್ವಜ್ಞಾನಮಂ ಚಿತ್ತದೊ-
ಳ್ತಳೆದಾತ್ಮಂ ಚಲಗೆಟ್ಟು ಸಂಚಲಿಸದೇಕೀಭಾವದೊಳ್ಕೂಡಿ ನಿ-
ಮ್ಮೊಳೆ ಸಿಲ್ಕಿಂತಿದನಾಂ ಮರಲ್ದಿಱಿಪೆಂ ಶ್ರೀ ಚಂದ್ರಚೂಡಾಮಣೀ ೭೧

೭೧ ನನ್ನ ಭೌತಿಕ ಶರೀರ ಸ್ವಭಾವವನ್ನು ತಿಳಿದು, ಅದು ಆತ್ಮನಾದ ನಾನು ಅಲ್ಲವೆಂದು ನಿಶ್ಚಯಿಸಿ, ದೃಢನಿರ್ಧಾರದಿಂದ ದೇಹದ ಮೇಲಿನ ವ್ಯಾಮೋಹವನ್ನು ಬಿಸುಟು, (ಯಾವುದು ನಿತ್ಯ ಯಾವುದು ಅನಿತ್ಯ ಎಂಬ) ತತ್ತ್ವಜ್ಞಾನವನ್ನು ಮನಸ್ಸಿನಲ್ಲಿ ಧಾರಣಮಾಡಿ, ನನ್ನ ಆತ್ಮವು ತನ್ನ ಸ್ಥಿರಸಂಕಲ್ಪವನ್ನು ಬಿಟ್ಟು ಬೇರೆಯ ಕಡೆ ಚಲಿಸದೆ, ಒಂದೇ ಮನಸ್ಸಿನಿಂದ ನಿಮ್ಮಲ್ಲಿಯೇ ಸೇರಿ ನಿಲ್ಲಲಿ. ಈ ಒಂದು ಬೇಡಿಕೆಯನ್ನು ಮತ್ತೆ ನಿಮ್ಮಲ್ಲಿ ಬೇಡುತ್ತೇನೆ, ಓ ಚಂದ್ರಚೂಡಾಮಣೀ.

ಪ್ರಕೃತಿಸ್ವಭಾವ–(ಪಂಚಭೂತಾತ್ಮಕವಾದ) ದೇಹದ ಸ್ವಭಾವ, ದೇಹಧರ್ಮ. ಚಲಗೆಟ್ಟು–ಸ್ಥಿರಸಂಕಲ್ಪವನ್ನು, ಛಲವನ್ನು, ಬಿಟ್ಟು. ಏಕೀಭಾವ–ಒಂದೇ ಚಿತ್ತವೃತ್ತಿ, ಮನಸ್ಸು. ಎಱಿ[3]–ಬೇಡು, ಪ್ರಾರ್ಥಿಸು.

ಮೊದಲೊಳ್ ಮೂರ್ತಿಯನಿಂತುಟೆಂದಱಿದು ತ[3][ದ್ಧ್ಯಾ]ನಾಂಗ ಮೋಕ್ಷಾರ್ಥಸಂ-
ಪದ ನೀನೆಂದಖಿಳಾರ್ಚನಾ ಜಪ ಸಮಾಧಿ ಧ್ಯಾನ ಸಾತತ್ಯಹೋ-
ಮದಿನಾರಾಧಿಸೆ ಖೇಚರೇಂದ್ರದಿವಿಜೇಶೋಪೇಂದ್ರಸಾಮ್ರಾಜ್ಯಸಂ-
ಪದಮಕ್ಕುಂ ಸಕಳೇಶ ನಿಮ್ಮ ದಯೆಯಿಂ ಶ್ರೀ ಚಂದ್ರಚೂಡಾಮಣೀ ೭೨

೭೨ ಪ್ರಾರಂಭದಲ್ಲಿ ನಿನ್ನ ಮೂರ್ತಿಸ್ವರೂಪವನ್ನು 'ಈ ರೀತಿ ಇದೆ' ಎಂದು ತಿಳಿದುಕೊಂಡು, ನಿನ್ನ ಮೂರ್ತಿಧ್ಯಾನದ ಅಂಗಭೂತಫಲರೂಪವಾದ ಮೋಕ್ಷಸಂಪತ್ತೀ ನೀನು ಎಂದು (ತಿಳಿದು), ನಾನಾ ಉಪಚಾರಪೂರ್ವಕವಾದ ಪೂಜೆ ಜಪ ಸಮಾಧಿ ಧ್ಯಾನ ನಿರಂತರ ಹೋಮ ಮೊದಲಾದ ವಿಧಾನಗಳಿಂದ ನಿನ್ನನ್ನು ಆರಾಧಿಸಿದರೆ, ಸಕಲೇಶನಾದ ಚಂದ್ರಚೂಡಾಮಣಿಯೇ, ಗಂಧರ್ವರಾಜ ಪದವಿ ದೇವೇಂದ್ರ ಪದವಿ ಉಪೇಂದ್ರ ಪದವಿ ಮೊದಲಾದ ಸಾಮ್ರಾಜ್ಯಸಂಪತ್ತು ಲಭಿಸುವುದು.

ಇಂತುಟು–ಹೀಗೆ. ಧ್ಯಾನಾಂಗ–ಪತಂಜಲಿಪ್ರಣೀತ ಅಷ್ಟಾಂಗಯೋಗಗಳಲ್ಲಿ ಒಂದು ಅಂಗ. ಆ ಎಂಟು ಯೋಗಾಂಗಗಳು ಯಾವುವೆಂದರೆ: ಯಮ, ನಿಯಮ, ಆಸನ,

---

1 ವಾನ 2 ಶ್ಚಯ 3 ಧ್ಯಾ

ಪ್ರಾಣಾಯಾಮ, ಪ್ರತ್ಯಾಹರ, ಧಾರಣ, ಧ್ಯಾನ, ಸಮಾಧಿ. ಖೇಚರ–ಆಕಾಶದಲ್ಲಿ ಸಂಚರಿಸುವ ದೇವಗಣಗಳಲ್ಲಿ ಒಬ್ಬ: ಗಂಧರ್ವ, ಯಕ್ಷ, ಕಿನ್ನರ, ಇತ್ಯಾದಿ.

ಅದು ತಾಂ ಮಿಂಚಿನಗೊಂಚಲಂತೆ ಶಶಿಸೂರ್ಯಜ್ಯೋತಿಯಂತುಗ್ರಭಾ-
ಸ್ವದುದಾತ್ತ ಸ್ಫಟಿಕಾದ್ರಿಯಂತೆ ಬೆಳಗುತ್ತಿರ್ಪಾ ಪರಂಜ್ಯೋತಿಯೆಂ-
ಬುದನುನ್ಮೀಳಿಸಿ ತನ್ನುಮಂ ಜಗಮುಮಂ ಪ್ರದ್ಯೋತಿಸಂ ತಾನೆ ಕಾ-
ಣ್ಬುದದೆಯ್ದಿಕ್ಕುಮುದಾರುಮೆಯ್ದುದೆಡೆಯಂ ಶ್ರೀ ಚಂದ್ರಚೂಡಾಮಣೀ ೭೩

೭೩ ಮಿಂಚಿನ ಗೊಂಚಲಿನಂತೆ, ಚಂದ್ರಸೂರ್ಯರ ಬೆಳಕಿನಂತೆ, ಭಯಂಕರವಾಗಿ ಪ್ರಕಾಶಿಸುವ ಉನ್ನತವಾದ ಸ್ಫಟಿಕಶಿಲೆಯ ಪರ್ವತದಂತೆ (ಅತ್ಯಂತ ಪ್ರಕಾಶಮಾನವಾಗಿಯೂ ಮಹೋನ್ನತವಾಗಿಯೂ) ಬೆಳಗುತ್ತಿರುವ ಆ ಪರಂಜ್ಯೋತಿಯನ್ನು (ಜ್ಯೋತಿಃಸ್ವರೂಪನಾದ ಪರಬ್ರಹ್ಮನನ್ನು) ತೆರೆದು ತೋರಿಸಿ ತನ್ನನ್ನೂ ಜಗತ್ತನ್ನೂ ತಾನೆ ಉಜ್ವಲವಾಗಿ ಬೆಳಗುವನು. ಈ ಮಹಾಜ್ಯೋತಿ ಕಾಣುತ್ತಿದೆ, ಯಾರೂ ಸೇರದ ಸ್ಥಳವನ್ನು ಸೇರಿದೆ, ಶ್ರೀ ಚಂದ್ರಚೂಡಾಮಣೀ.

ಭಾಸ್ವತ್–ಪ್ರಕಾಶಮಾನವಾದ. ಅದ್ರಿ–ಬೆಟ್ಟ, ಪರ್ವತ. ಪರಂಜ್ಯೋತಿ–ಜ್ಯೋತಿಃಸ್ವರೂಪನಾದ ಪರಮಾತ್ಮ. ಉನ್ಮೀಲಿ(ಳಿ)ಸು–ತೆರೆ, ತೆರೆದುಕಾಣಿಸು. ಪ್ರದ್ಯೋತಿಸು–ವಿಶೇಷವಾಗಿ ಬೆಳಗು. ಎಯ್ದು–ಸೇರು.

ಮನ ಮಂತ್ರ[1]ಪ್ರಣವಾಕ್ಷರಾತ್ಮಸಹಿತಂ ಶ್ವಾಸಾನಿಳಂ ಪೋಗೆ ನಿ-
ನ್ನನೆ ತಾನೆಯ್ದಿ ಬರಲ್ಕೆ ಬರ್ಪಗತಿಯೊಂದಭ್ಯಾಸದೊಳ್ಕೂಡಿ ತ-
ನ್ಮನಮುಂ ವಾಯುವದೆಲ್ಲವಸ್ತಮಿಸಲಾನಂದೋತ್ಸವಂ ಪುಟ್ಟುಗುಂ
ಜನಿತಾಸಂಗಸುಖಸ್ವರೂಪಮುದಜಿಂ ಶ್ರೀ ಚಂದ್ರಚೂಡಾಮಣೀ ೭೪

೭೪ ಪ್ರಣವಾಕ್ಷರವಾದ ಓಂಕಾರಮಂತ್ರಸಹಿತ ಶ್ವಾಸವಾಯು ಹೊರಟುಹೋಗಲು (ಎಂದರೆ, ಶ್ವಾಸನಿರೋಧವಾಗಲು) ನನ್ನ ಮನಸ್ಸು ನಿನ್ನನ್ನೆ ಸೇರಿ (ಎಂದರೆ ನಿನ್ನಲ್ಲಿ ಐಕ್ಯವಾಗಿ) ಬರುತ್ತಿರಲು, ಆ ಸಂಚಾರಗಮನದ ಅಭ್ಯಾಸಾವಸರದಲ್ಲಿ ಆ ಮನಸ್ಸೂ ವಾಯುವೂ ಎಲ್ಲವೂ ಲಯವಾಗಿ (ಸಂಪೂರ್ಣ ಶ್ವಾಸನಿರೋಧದೊಂದಿಗೆ ಮನೋಲಯವಾಗಿ ಅಂದರೆ ಮನಸ್ಸಿನ ಪ್ರವೃತ್ತಿಯೆಲ್ಲವೂ ನಿಂತುಹೋಗಿ), ಅದರ ಪರಿಣಾಮವಾಗಿ ಜನಿಸುವ ಅಸಂಗ (ನಿರ್ಲಿಪ್ತ) ಸುಖಸ್ವರೂಪವಾದ ಒಂದು ಆನಂದೋತ್ಸವವು (ಪರಮಾನಂದವು) ಹುಟ್ಟುವುದು, ಶ್ರೀ ಚಂದ್ರಚೂಡಾಮಣೀ.

ಮಂತ್ರ ಪ್ರಣವಾಕ್ಷರ–'ಓಂ'ಕಾರ (ಅ ಉ ಮ ಎಂಬ ಮೂರು ಅಕ್ಷರಗಳು ಕೂಡಿ ಆದ, ಪರಬ್ರಹ್ಮಸಂಕೇತವಾದ, ಮಂತ್ರಾಕ್ಷರ). ಶ್ವಾಸಾನಿಲ(ಳ)- ಶ್ವಾಸವಾಯು; ಉಸಿರಿನ ಗಾಳಿ.

1 ತ್ರಃ

ಅಸ್ತಮಿಸು–ಮುಳುಗು, ಕಾಣದಾಗು, ಇಲ್ಲವಾಗು. ಜನಿತಾಸಂಗಸುಖ (ಜನಿತ + ಅಸಂಗ + ಸುಖ)–ಲೋಕಸಂಪರ್ಕವನ್ನು ಪೂರ್ಣವಾಗಿ ಕಳೆದುಕೊಂಡದ್ದರಿಂದ ಉಂಟಾಗುವ ಅಲೌಕಿಕ ಸುಖ.

ಪರಮಾನಂದಮಯಾತ್ಮನಾಗಿ ಸುಖಮಂ ನೀನೆಂದು ತಲ್ಲೀನನಾ-
ಗಿರೆ ರಂಧ್ರಾಂತರದಿಂದೆ ನಾದಮುದಯಿಕ್ಕುಂ ತಾನೆ ನಾದಾತ್ಮನಾ-
ಗಿರೆ ಯೋಗಾಮೃತವಾರಿಯುಂ ಪುಳಕಮುಂ ನೇತ್ರಪ್ರಮೋದಾಶ್ರುವುಂ
ದೊರೆಕೊಳ್ಗುಂ ಪರಮಾತ್ಮ ನಿನ್ನ ದಯೆಯಿಂ ಶ್ರೀ ಚಂದ್ರಚೂಡಾಮಣೀ ೭೫

೭೫ ಎಲೈ ಚಂದ್ರಚೂಡಾಮಣೀ, ಪರಮಾನಂದ (ಬ್ರಹ್ಮಾನಂದ) ವನ್ನು ತುಂಬಿ-ಕೊಂಡವನಾಗಿ, ಆ ಸುಖವೇ ಆನಂದವೇ ನೀನು ಎಂದು ಆ ಆನಂದದಲ್ಲಿಯೇ ಲೀನವಾಗಿರಲು, ಒಂದಾಗಿ ಕೂಡಿಕೊಂಡಿರಲು, ಬ್ರಹ್ಮರಂಧ್ರದಿಂದ ನಾದ ಹುಟ್ಟುವುದು; ಹೀಗೆ ತಾನು ನಾದಾತ್ಮ, ನಾದಮಯ ಆಗಿರಲಾಗಿ, ಯೋಗ (ಬ್ರಹ್ಮೈಕ್ಯಭಾವ) ವೆಂಬ ಅಮೃತಜಲವೂ ರೋಮಾಂಚವೂ ಕಣ್ಣಲ್ಲಿ ಆನಂದಬಾಷ್ಪವೂ ಉಂಟಾಗುವುವು.

ಪರಮಾನಂದ–ಯೋಗಸಿದ್ಧಿಯಿಂದ ದೊರೆಯುವ ಶ್ರೇಷ್ಠವಾದ ಆನಂದ. ತಲ್ಲೀನ–ಯಾವುದು ಉದ್ದಿಷ್ಟವೋ ಅದರಲ್ಲಿ ಬೆರೆತುಹೋಗುವುದು. ರಂಧ್ರ–ಬ್ರಹ್ಮರಂಧ್ರ: ಯೋಗದಲ್ಲಿ ಹೇಳಿರುವ ಷಟ್‌ಚಕ್ರಶ್ರೇಣಿಯಲ್ಲಿ ಸಹಸ್ರಾರಚಕ್ರದಲ್ಲಿರುವ ಬ್ರಹ್ಮಾನುಭವಮಾರ್ಗ.

**ಷಟ್‌ಚಕ್ರ:** ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ, ಸಹಸ್ರಾರ.

**ನಾದ:** ಪ್ರಣವನಾದ; ಶಬ್ದಬ್ರಹ್ಮನಿವಾಸವಾದ ವಿಶುದ್ಧಿಚಕ್ರದಲ್ಲಿ ಕೇಳಿಬರುವಂಥದು.

ಸಲೆ ತನ್ನಿಂದವೆ ತನ್ನನೀಕ್ಷಿಸಿ ಜಗದ್ವ್ಯಾಪಾರದೊಳ್ ಕೂಡಿ ಹಂ-
ಬಲಿಪಾ ವ್ಯಾಪ್ತಿಯನೆಲ್ಲಮಂ ಮರೆಸಿಗುಮಂತಾ ವ್ಯಾಪ್ತಿ ಕೆ[1]ಟ್ಟಂದು ಕೋ-
ಟಲೆ ಪೋಕುಂ ಮನದಿಂದೆ ಕೋಟಲೆ ಕೆಡಲ್[ಲ್‌ಸೌ][2]ಖ್ಯಾತ್ಮನಕ್ಕುಂ ಸುನಿ-
ಶ್ಚಲ ಸೌಖ್ಯಾತ್ಮಕನಾಗೆ ನೀನೆನಿಸುಗುಂ ಶ್ರೀ ಚಂದ್ರಚೂಡಾಮಣೀ ೭೬

೭೬ ಚೆನ್ನಾಗಿ ತನ್ನಿಂದ (ತಾನು) ತನ್ನನೀಕ್ಷಿಸಿ (ಎಂದರೆ ತಾನು ಜೀವಾತ್ಮ ಎಂಬ ಅರಿವನ್ನು ಹೊಂದಿ, ಆತ್ಮನಿರೀಕ್ಷಣೆಮಾಡಿಕೊಂಡು), ಲೋಕವ್ಯವಹಾರದಲ್ಲಿ ಬೆರೆತು ಲೌಕಿಕಸುಖಕ್ಕಾಗಿ ಹಂಬಲಿಸುವುದೆಲ್ಲವೂ ಮರೆತುಹೋಗುವುದು. ಆ ಹಂಬಲಿಕೆಯ ಹರವು ನಾಶವಾದಾಗ ಲೋಕಸಂಬಂಧವಾದ ಹಿಂಸೆಯೆಲ್ಲವೂ (ತಾಪತ್ರಯವೆಲ್ಲವೂ) ಹೊರಟುಹೋಗುವುದು. ಮನಸ್ಸಿನಿಂದ ಲೋಕಸಂಬಂಧವಾದ ಕೋಟಲೆ

---

1 ಟ್ಟಿ 2 ತ್ಸೌ

ಮಾಯವಾದಾಗ, ತಾನು ನಿಜವಾದ (ಅಲೌಕಿಕ) ಸುಖವನ್ನು ಹೊಂದುವನು; ಆ ಕದಲದ (ನಾಶರಹಿತವಾದ) ಸುಖ ಹೊಂದಿದಾಗ ತಾನು ನೀನೇ ಎಂಬ ಭಾವ (ಸೋಹಂಭಾವ, ಅಹಂ ಬ್ರಹ್ಮಾಸ್ಮಿ ಎಂಬ ಭಾವ) ಉಂಟಾಗುವುದು.

[ತನುವ]ದಿಂದ್ರಿಯಮಿಂದ್ರಿಯಪ್ರಕರದಿಂದಂ x x x x x x
x x x x x x x x x x x x x x x x x x x x
x x x x x x x x x x x x x x x x x x x x
x x x x x x x x x x x x x x x x x x x x

೭೭ ಈ ಪದ್ಯದ ಆಸಮಗ್ರ ಪ್ರಥಮಪಾದ ಹೊರತಾಗಿ ಉಳಿದ ಮೂರು ಪಾದಗಳೂ ಹಸ್ತಪ್ರತಿಯಲ್ಲಿ ತ್ರುಟಿತವಾಗಿವೆ.

ಕರಣಂ ಜ್ಞಾನಮನೆಲ್ಲಮಂ [1][ಮುಳಿಸಿ][1] ತದ್ದೇಹಾದಿ ತದ್ವಸ್ತುವಂ
ಚಿರಮಾಗಲ್ಲವಮಂ ವಿಭೇದ ಮನದಿಂ ತಾನೆಂಬ ಸಂಕಲ್ಪ ದು-
ಸ್ತರ ದುರ್ಬೋಧ[ಮನೊಕ್ಕು ಮಿಕ್ಕಜಿತದಿಂದಾಂ ನೀನೆನುತ್ತಿಪ್ಪ ಸಂ-][2]
ಸ್ಮರಣವ್ಯಾಪ್ತಿ ಜ[ಗಿ][3]ಲ್ತು ನಿಲ್ಕೆ ಮನದೊಳ್ ಶ್ರೀ ಚಂದ್ರಚೂಡಾಮಣೀ ೭೮

೭೮ ಇಂದ್ರಿಯಜನ್ಯವಾದ ಬಾಹ್ಯಪ್ರಪಂಚದ ಜ್ಞಾನವೆಲ್ಲವನ್ನೂ ಮರೆತು, ಆ ಇಂದ್ರಿಯಗಳಿಗೆ ಆಶರವಾದ ದೇಹವೇ ಮೊದಲಾದ ತತ್ಸಂಬಂಧವಾದ ಕ್ಷಣಭಂಗುರ ಭೌತವಸ್ತುಗಳನ್ನು ಭೇದಬುದ್ಧಿಯಿಂದ ತಾನೆಂಬ ನಿಶ್ಚಯದ, ಪಾರಾಗಲು ಅಸಾಧ್ಯವಾದ ಅಜ್ಞಾನವನ್ನು ನೀಗಿಕೊಂಡು ಮೇಲಾದ ಸುಜ್ಞಾನದಿಂದ 'ನಾನು ನೀನು' ಎಂಬ ಸುಸ್ಮರಣವು ನನ್ನ ಮನಸ್ಸಿನಲ್ಲಿ ಅಂಟಿಕೊಂಡು ನೆಲೆ ನಿಲ್ಲಲಿ, ಶ್ರೀ ಚಂದ್ರಚೂಡಾಮಣೀ.

ಕರಣ–ಇಂದ್ರಿಯ (ಮುಖ್ಯವಾಗಿ ಜ್ಞಾನೇಂದ್ರಿಯಗಳಲ್ಲಿ ಒಂದು). ವಿಭೇದಮನ–ಭೇದಬುದ್ಧಿ (ಪರಮಾತ್ಮ ಬೇರೆ ತಾನು ಬೇರೆ, ದೇಹವೇ ತಾನು ಎಂದು ತಿಳಿಯುವ ಬುದ್ಧಿ.) ದುಸ್ತರ–ದಾಟಲು ಅಸಾಧ್ಯವಾದ. ದುರ್ಬೋಧ–ಕೆಟ್ಟ ತಿಳುವಳಿಕೆ, ಅಜ್ಞಾನ. ಒಕ್ಕು–ಬೇರ್ಪಡಿಸಿ, ಕಳೆದುಕೊಂಡು. ವಿಕ್ಕಜಿತ–ಹೆಚ್ಚಿನ ತಿಳುವಳಿಕೆ.

ಒಳಕೊಂಡಿರ್ಪ ಪದಾರ್ಥಮಿಲ್ಲಣಮೆ ತಾನೀ ವಿಶ್ವಮಂ ಕೂಡಿ ನಿ-
ನ್ನೊಳಕೊಂಡಿರ್ದೆಡೆ ಯೆಂಬ ಪುಂಬಲೊಳೆ ಸರ್ವಂ ಖಲ್ವಿದಂ ಬ್ರಹ್ಮವೆಂ-
ದೊಳಕೊಂಡಿರ್ಪುದಶೇಷಮುಂ ಸಕಲಮುಂ ತಾನಕ್ಕುಮಂತಾಗಿ ನೀ-
ನೊಳಕೊಳ್ವೈ ಬಿಡದಾ ಮಹಾಪುರುಷರಂ ಶ್ರೀ ಚಂದ್ರಚೂಡಾಮಣೀ ೭೯

---

1 ಮರದು 2 ಸ್ವೀಪಾ (ಮ) (ಈ ಭಾಗ ಕ.ಅ.ಸಂ. ಪ್ರತಿಯಲ್ಲಿ ತ್ರುಟಿತ) 3 ಗು

೭೯ ಈ ವಿಶ್ವವನ್ನು ನೀನು ಕೂಡಿಕೊಂಡು ಒಳಕೊಂಡಿರುವ ಪಕ್ಷದಲ್ಲಿ, (ನಿನ್ನ ಹೊರತು) ತಾನು (ಇತರವನ್ನು) ಒಳಕೊಂಡಿರುವ **ಬೇರೆಯ** ಪದಾರ್ಥ ಲವಲೇಶವೂ ಇಲ್ಲ–ಎಂಬ ಆಕಾಂಕ್ಷೆಯುಳ್ಳ, 'ಸರ್ವಂ ಖಲ್ವಿದಂ ಬ್ರಹ್ಮ' (ಎಲ್ಲವೂ ನಿಶ್ಚಯವಾಗಿ ಬ್ರಹ್ಮ) ಎಂಬುದು ಯಾವುದನ್ನೂ ಉಳಿಯಗೊಡದೆ ಸರ್ವಸ್ವವೂ ಸಂಪೂರ್ಣವಾಗಿ (ನಿನ್ನಲ್ಲಿ) ಅಡಗಿರುವುದು ಎಂದಾಯಿತು. ಹಾಗಾಗಿ, ಎಲೈ ಚಂದ್ರಚೂಡಾಮಣಿ, ಪ್ರಸಿದ್ಧ ಮಹಾಪುರುಷರನ್ನೂ ನೀನು ಒಳಕೊಳ್ಳುವೆ.

ಅಣು–ಸ್ವಲ್ಪವೂ. ಹಂಬಲ್–ಹಂಬಲ, ಅಪೇಕ್ಷೆ, ಆಕಾಂಕ್ಷೆ. ಖಲು–ನಿಶ್ಚಯವಾಗಿ. ಅಶೇಷ–ಉಳಿಯದಿರುವುದು. ಅಕ್ಕುಂ–ಆಗುವುದು.

ಕ್ರಮದಿಂ ತನ್ನಯ ರೂ[1]ಪ[1]ರೂಪವೆನಲುರ್ವ್ಯಂತರಿಕ್ಷಾದಿ ವಿ-
ಶ್ವಮುಮಂ ಶೂನ್ಯಮೆನಲ್ಕೆ ಕಂಡವನೆ ನೀನೆಂದಿರ್ಪುದಯ್ಯೋ ಮಮ
ಭ್ರಮಮಪ್ಪಂದಮಭೇದ್ಯಮಪ್ಪ ಬಗೆಯಿಂದಾ ಯೋಗಿಗಾ ಯೋಗಮು-
ತ್ತಮ ಸೌಖ್ಯಾದಿ ಸುಯೋಗಫಲಮಂ[2] ನೆಱಪುಗುಂ[3] ಶ್ರೀ ಚಂದ್ರಚೂಡಾಮಣೀ ೮೦

೮೦ ನಿನ್ನ ರೂಪ ನಿಜವಾಗಿ ಅರೂಪ (ಆಕಾರ ಆಕಾರವಲ್ಲ) ಎನ್ನುವುದಾದಲ್ಲಿ, ಭೂಮಿ ಆಕಾಶ ಮೊದಲಾಗಿ ಸಕಲ ವಿಶ್ವವೂ ಶೂನ್ಯ (ಸೊನ್ನೆ : ಇದ್ದೂ ಇಲ್ಲದ್ದು) ಎನ್ನುವುದಾದಲ್ಲಿ, (ಆ ಇಲ್ಲದಿರುವುದನ್ನು) ಕಂಡು ಅದನ್ನೆ ನೀನು ಎಂದುಕೊಂಡಿರುವುದು, ನನ್ನ ಭ್ರಮಾಕಲ್ಪನೆಯಾಗಿರುವುದು. (ನೀನು ನಿರಾಕಾರವಾದರೂ ಶೂನ್ಯವಲ್ಲ, ಸತ್ಯ). ಅಯ್ಯೋ, ಭೇದಿಸಲಾಗದ (ಒಡೆದುನೋಡಿ ತಿಳಿಯಲಾಗದ) ಈ ಎಣಿಕೆಯಿಂದ (ಕೈಕೊಂಡ) ಯೋಗವು ಉತ್ತಮವಾದ ಸೌಖ್ಯವೇ ಮೊದಲಾದ ಅದೃಷ್ಟಫಲಗಳನ್ನು ಸಂಗ್ರಹಿಸಿ ಕೊಡುವುದು.

ರೂಪರೂಪ (ರೂಪು + ಅರೂಪ)–ಆಕಾರ ಮತ್ತು ನಿರಾಕಾರ. ಉರ್ವಿ–ಭೂಮಿ. ಶೂನ್ಯ–ಸೊನ್ನೆ, ಅಭಾವ, ಏನೂ ಇಲ್ಲದಿರುವ ಸ್ಥಿತಿ. ಮಮ–ನನ್ನ. ಭ್ರಮ–ಭ್ರಮೆ (ಇಲ್ಲದ್ದನ್ನು ಇದೆ ಎಂದು ತಿಳಿಯುವುದು), ಒಂದನ್ನು ಇನ್ನೊಂದಾಗಿ ತಿಳಿಯುವುದು. (ಉದಾ., ಹಗ್ಗವನ್ನು ಹಾವು ಎಂದು ತಿಳಿಯುವುದು); ತಪ್ಪು ತಿಳಿವಳಿಕೆ, ಮಿಥ್ಯಾ ಜ್ಞಾನ. ಅಭೇದ್ಯ – ಭೇದಿಸಲಾಗದ್ದು, ರಹಸ್ಯ. ಬಗೆ – ಎಣಿಕೆ, ರೀತಿ. ನೆಱಪು – ಸಂಗ್ರಹಿಸು, ಒಟ್ಟುಗೂಡಿಸು ; ಪೂರ್ಣಮಾಡು.

ರವಿಯೆಂದರ್ಘ್ಯಮನಗ್ನಿಯೆಂದು ಹವಿಯಂ ತ್ರೈಮೂರ್ತಿಯೆಂದರ್ಚನೋ-
ತ್ಸವಮಂ ಶಾಶ್ವತನೆಂದು ಸಂಸ್ಮರಣೆಯಂ ಕೈಕೊಂಡು ಭಕ್ತಾಳಿಗು-
ತ್ಸವಮಂ ಮಾಡುವ ಖಂಡಿತ ಪ್ರಭುವೆ ನೀಂ ಸರ್ವಜ್ಞನುಂ ಸ್ವಾಮಿಯುಂ
[4][ಭು][4]ವನಕ್ಕೀಶ್ವರ ನೀನೆ ಮತ್ತೆ ಪೆಱರಾರ್ ಶ್ರೀ ಚಂದ್ರಚೂಡಾಮಣೀ ೮೧

---

1 ಪು 2 ಮುಂ 3 ವಂ

೮೧ ಸೂರ್ಯನೆಂದು (ಸೂರ್ಯನ ರೂಪದಲ್ಲಿ) ಅರ್ಘ್ಯವನ್ನೂ, ಅಗ್ನಿ ಎಂದು ಹವಿಸ್ಸನ್ನೂ, (ಚತುರ್ಮುಖ)ಬ್ರಹ್ಮ ಮಹೇಶ್ವರ ವಿಷ್ಣು ಎಂಬ ತ್ರಿಮೂರ್ತಿಯಾಗಿ ಅರ್ಚನೆಯ ಸಡಗರವನ್ನೂ ಶಾಶ್ವತ ಎಂದು ಕೇವಲ ಸಂಸ್ಕರಣರೂಪದ ಧ್ಯಾನವನ್ನೂ ಒಪ್ಪಿಸಿಕೊಳ್ಳುತ್ತಾ ಭಕ್ತಸಮೂಹಕ್ಕೆ ಸಂತೋಷವನ್ನುಂಟುಮಾಡುವ ನಿಶ್ಚಿತ ಪ್ರಭುವೆ, ಶ್ರೀ ಚಂದ್ರಚೂಡಾಮಣೀ, ಸರ್ವಜ್ಞನೂ ಸ್ವಾಮಿಯೂ ಜಗತ್ತಿಗೆ ಒಡೆಯನೂ ನೀನೇ. ನೀನಲ್ಲದೆ ಬೇರೆ ಯಾರುಂಟು ?

ಭುವನ–ಜಗತ್ತು.

**ಉರಿಯೊಳ್ ಕೂಡಿದುದಗ್ನಿಯಕ್ಕುಮುರಿಯೊಳ್ಕೂಡಿರ್ದು**[1]**[ದಾತ್ಮ]**[1]**ನ್ನಮಾ-**
**ವರಿಸುತ್ತಾತ್ಮನೊಳೊಂದಿ**[2]**[ಸ]**[2]**ತ್ತಿರಲಮಂ ಸರ್ವಜ್ಞನಕ್ಕುಂ ಮಹೇ-**
**ಶ್ವರ ಜೀವಾತ್ಮನಗಲ್ದು ಪೋಗೆ ವಿಪುಳಜ್ಞಾನಂ ತದಾತ್ಮಂಗೆ ತಾಂ**
**ದೊರೆಕೊಳ್ಗುಂ ನಿಜಸನ್ನಿಧಾನವಶದಿಂ ಶ್ರೀ ಚಂದ್ರಚೂಡಾಮಣೀ** ೮೨

೮೨ ಉರಿಯಲ್ಲಿ ಕೂಡಿದ ವಸ್ತು ತಾನೂ ಉರಿಯಾಗಿ ಅದರಲ್ಲಿ ನಾಶವಾಗಿ ಹೋಗುವುದು. ಅದೇ ರೀತಿ, (ಯೋಗವೆಂಬ) ಅಗ್ನಿಯಲ್ಲಿ ಬೆಂದು ಆತ್ಮನನ್ನು ಆವರಿಸಿಕೊಂಡಿದ್ದ ತೃಷ್ಣೆ ಸತ್ತುಹೋಗಲು (ಎಂದರೆ ತೃಷ್ಣಾಕ್ಷಯವಾಗಲು) ತೃಷ್ಣೆ ಕ್ಷಯವಾದವನು ಸರ್ವಜ್ಞನೆನಿಸುವನು ಮಹೇಶ್ವರನೆ, ನಿನ್ನ ಸನ್ನಿಧಾನವನ್ನು ಹೊಂದಿ, ಜೀವಾತ್ಮನು ಬೇರೆಯಾಗಿ ಹೋದಾಗ – ಆ ಆತ್ಮನಿಗೆ ಜ್ಞಾನ ದೊರೆಕೊಳ್ಳುವುದು. (ಈ ಪದ್ಯದಲ್ಲಿ ಸ್ವಲ್ಪ ಅರ್ಥಕ್ಲೇಶವಿದೆ.)

ತೃಷ್ಣ–ಕಾಮನೆ, ಬಯಕೆ.

**ನವ ಕಾಳಾಗರುಧೂಪದಿಂ ಪರಿಮಳಂ ವಸ್ತ್ರಾಳಿಗಪ್ಪಂತೆ ಪು-**
**ಷ್ಪವಿಭೇದೋದ್ಗಮಗಂಧವಾಸನೆಯಿನಾ ತೈಲಕ್ಕೆ ಕಂಪಪ್ಪವೊಲ್**
**ಶಿವ ನಿಮ್ಮಂ ಸಲೆ ವಾಸಿಸಲ್ಪ**[3]**[ರ]**[3]**ಮ ತತ್ತ್ವಜ್ಞಾನಮೀಶಾನ ನಿ-**
**ನ್ನವೊಲಕ್ಕುಂ ನಿಜಸೇವೆಯೆಂಬ ಗುಣದಿಂ ಶ್ರೀ ಚಂದ್ರಚೂಡಾಮಣೀ** ೮೩

೮೩ ಹೊಸ ಕಪ್ಪು ಅಗರು (ಒಂದು ಸುಗಂಧ ದ್ರವ್ಯ) ಧೂಪದ ಸಂಪರ್ಕದಿಂದ ವಸ್ತ್ರಗಳಿಗೆ ಸುಗಂಧ ವ್ಯಾಪಿಸಿಕೊಳ್ಳುವಂತೆ, ವಿಶಿಷ್ಟ ಜಾತಿಯ ಪುಷ್ಪವನ್ನು ಹಾಕಿದ ಎಣ್ಣೆಗೆ ಆ ಪುಷ್ಪದ ಸುವಾಸನೆ ದೊರೆಕೊಳ್ಳುವಂತೆ, ನಿಮ್ಮ ಸನ್ನಿಧಿಯಲ್ಲಿ ವಾಸಿಸುತ್ತ ನಿಮ್ಮನ್ನು ಅಂತಃಕರಣಪೂರ್ವಕವಾಗಿ ಸೇವೆ ಮಾಡುವುದರಿಂದ ಪರಮತತ್ತ್ವಜ್ಞಾನವು ಲಭಿಸಿ ಅದು ನಿಮ್ಮ ಹಾಗೆಯೇ ಆಗುವುದು, ಶ್ರೀ ಚಂದ್ರ ಚೂಡಾಮಣೀ. (ಶಿವನ ಸೇವೆ ಶಿವಜ್ಞಾನವೇ—ಬ್ರಹ್ಮಜ್ಞಾನವೇ– ಆಗುವುದು ಎಂದು ತಾತ್ಪರ್ಯ).

1 ದಂಕ್ಯ  2 ಸು  3 ರೆ

ಕಾಳಾಗರು (ಅಗರು=ಅಗಿಲು) – ಒಂದು ಬಗೆಯ ಕಪ್ಪು ಸುಗಂಧ ದ್ರವ್ಯ. ಧೂಪ–ಸುಗಂಧದ ಹೊಗೆ. ವಸ್ತ್ರಾಳಿ–ವಸ್ತ್ರಗಳ ಸಮೂಹ. ಈಶಾನ–ಈಶ, ಈಶ್ವರ.

ಮೊಗೆದಂಬೋಧಿಯ ನೀರನಂಬುಧಿಗೆ ವರ್ಷಾಕಾಲದೊಳ್ ಮೇಘಮಾ-
ಲೆಗಳೀವಂತಿರೆ ವಿಶ್ವಭೋಕ್ತೃಜನಿತಾಸತ್ಕರ್ಮವಂ ಕೊಂಡು ನೆ-
ಟ್ಟ[1][ನೆ][1] ಸತ್ಕರ್ಮಫಲಂಗಳಂ ಕ್ರಮದಿ ಕೊಂಬಾ ದಾತೃವುಂ ಭೋಕ್ತೃವುಂ
ನಗಜಾವಲ್ಲಭ ನೀನೆ ಮತ್ತೆ ಪೆಱರಾರ್ ಶ್ರೀ ಚಂದ್ರಚೂಡಾಮಣೀ ೭೪

೭೪ ಮಳೆಗಾಲದಲ್ಲಿ ಮೋಡಗಳು ಸಮುದ್ರದ ನೀರನ್ನು ಹೀರಿಕೊಂಡು ಪುನಃ ಸಮುದ್ರಕ್ಕೇ ಕೊಡುತ್ತವೆ. ಅದೇ ರೀತಿಯಲ್ಲಿ, ಜೀವಾತ್ಮರುಗಳ ಮೂಲಕ ಸಮಸ್ತ ವಿಶ್ವವನ್ನೂ ಭೋಗಿಸುವ ವಿಶ್ವಭೋಕ್ತೃವಾದ ನೀನು ಸಮುದ್ರದೋಪಾದಿ ಯಲ್ಲಿ ಜೀವಾತ್ಮರ ಒಳ್ಳೆಯ ಕರ್ಮಗಳ ಫಲಗಳನ್ನು (ಸುಖ ಭೋಗಭಾಗ್ಯ ಗಳನ್ನು) ಅವರಿಗೆ ನೀಡುವ ದಾತೃವಾಗಿದ್ದೀಯೆ; ಜೀವಾತ್ಮನು ಪರಮಾತ್ಮನಾದ ನಿನ್ನ ಅಂಶರೂಪನೇ ಆದ್ದರಿಂದ ಆ ಸತ್ಕರ್ಮ ಫಲಗಳನ್ನು ಪರ್ಯಾಯವಾಗಿ ನೀನು ಭೋಗಿಸಿದಂತೆಯೇ ಆಗುವುದರಿಂದ, ಕೊಟ್ಟ ಕರ್ಮಫಲಗಳನ್ನು ಕೊಂಡು, ನೀನು ಭೋಕ್ತೃವೂ ಆಗಿದ್ದೀಯೆ. ಎಲೈ ಪಾರ್ವತೀಪತಿಯೆ, ಹೀಗೆ ಸಕಲ ಕರ್ಮಗಳ ಮತ್ತು ಕರ್ಮಫಲಗಳ ದಾತೃವೂ ಭೋಕ್ತೃವೂ ನೀನೆ ಆಗಿರುವೆ, ಬೇರೆ ಯಾರೂ ಅಲ್ಲ.

ಮೊಗೆ – ತುಂಬಿಕೊ, ಕುಡಿ, ಈಂಟು. ಅಂಬೋಧಿ, ಅಂಬುಧಿ – ಸಮುದ್ರ. ವರ್ಷಾಕಾಲ – ಮಳೆಗಾಲ. ಭೋಕ್ತೃ – ಭೋಗಿಸುವವನು, ಸುಖದುಃಖಗಳನ್ನು ಅನು ಭವಿಸುವವನು. ದಾತೃ – ದಾನಮಾಡುವವನು, ಕೊಡುವವನು. ನಗಜಾವಲ್ಲಭ – ಪಾರ್ವತೀವಲ್ಲಭ, ಈಶ್ವರ.

ಶಿವನುಂಬಂ ಶಿವನೂಡುಗುಂ ಶಿವನೆ ಪೂಜ್ಯಂ ಪೂಜೆಯಂ ಮಾಳ್ಪನುಂ
ಶಿವನಾಪ್ತಂ ಶಿವನಾಗಮಸ್ಥಿತ ಶಿವ ಜ್ಞಾನಂ ಶಿವ ಜ್ಞಾನಿಯುಂ
ಶಿವನಿಷ್ಟಂ ಶಿವನಿಷ್ಟಸಿದ್ಧಿಯನೀಜಲ್ಲೀವಂ ಶಿವಂ ಸರ್ವನುಂ
ಶಿವನೆಂದಾಂ ಶಿವ ನಿಮ್ಮನೆಯ್ದೆ[2][ಯಜಿ][2]ದೆಂ ಶ್ರೀ ಚಂದ್ರಚೂಡಾಮಣೀ ೭೫

೭೫ ಊಟಮಾಡುವವನು ಶಿವ, ಊಟ ಮಾಡಿಸುವವನೂ ಶಿವನೆ. ಪೂಜೆ ಮಾಡಿಸಿಕೊಳ್ಳುವವನು ಶಿವ, ಪೂಜೆ ಮಾಡುವವನೂ ಅವನೆ. ಶಿವನು ಜೀವಾತ್ಮ ರೂಪದಲ್ಲಿ ಹತ್ತಿರದವನು, ಆಗಮಪ್ರೋಕ್ತನಾಗಿ ಆಗಮಗಳಲ್ಲಿ ನೆಲಸಿರುವವನು, ದೂರಸ್ಥನಾಗಿ ಅರಿಯಬೇಕಾದವನು. ಶಿವನು ಜ್ಞಾನರೂಪಿ; ಜ್ಞಾನಿಯೂ

---

1 ಗೆ 2 ೦

ಆವನೆ. (ಜ್ಞಾನ ಜ್ಞೇಯ ಜ್ಞಾತೃ–ತಿಳಿವು ತಿಳಿಯಬೇಕಾದವನು ತಿಳಿಯುವವನು, ಎಲ್ಲವೂ ಒಬ್ಬನೇ.) ಇಷ್ಟಪಡುವವನು ಶಿವ, ಇಷ್ಟಸಿದ್ಧಿಯನ್ನು (ಇಷ್ಟಾರ್ಥಿಗೆ) ಪ್ರೀತಿಯಿಂದ ಕೊಡುವವನೂ ಅವನೆ. ಹೀಗೆ, ಸರ್ವವೂ ಶಿವ ಎಂದು ಚೆನ್ನಾಗಿ ತಿಳಿದೆನು, ಶ್ರೀ ಚಂದ್ರಚೂಡಾಮಣಿ.

ಉಣ್ಬಂ (> ಉಂಬಂ)–ಉಣ್ಣುವವನು ; ಅನುಭವಿಸುವವನು. ಊಡು–ಉಣಿಸು, ಊಟನಾಡಿಸು; ಅನುಭವವನ್ನು ಕೊಡು. ಆಗಮ–ಬ್ರಹ್ಮ (ಪರಶಿವ) ವಿಷಯಕಜ್ಞಾನ ವನ್ನು ತಿಳಿಸುವ ಶಾಸ್ತ್ರ ; ವೇದೋಪನಿಷತ್ತುಗಳು.

1[ಒ]1ಡನೊಯ್ಗುಂ ಕುಡದಿ2[ರ್ಪ ಮಾ]2ಲನಲ3[ನ]3ಲ್ಲಂ ತಪ್ಪ4[ದೆ]4ಲ್ಲಂದದಿಂ
ಪಿಡಿದಿರ್ದಾತನನೊಯ್ವು5[ತನ್ನೆಡೆಗೆ]5 ನಿಮ್ಮಂ ನಂಬಿದೆಂ ನಿಮ್ಮನಾಂ
ಬಿಡೆ ನೀನಿರ್ದೆಡೆಗೊಯ್ ಭವಾಂಬುಧಿಯ6[ನೆತ್ತಂ ಪಾಯ್ಸು]6 ನೀನೆನ್ನನಾ-
ವೆಡೆಯೊಳ್ ನೀನೊಳಕೊಳ್ಮದೀಶ ದಯೆಯಿಂ ಶ್ರೀ ಚಂದ್ರಚೂಡಾಮಣೀ ೮೬

೮೬ (ಯಾವನೊಬ್ಬನು ಮರಣಹೊಂದಿದಮೇಲೆ) ಅಗ್ನಿದೇವನು ತಾನು ವಶ ಪಡಿಸಿಕೊಂಡಿದ್ದಾತನನ್ನು ತನ್ನ ಎಡೆಗೆ ಜೊತೆಯಲ್ಲಿ ಕರೆದೊಯ್ಯುವನು, (ಆತ ನನ್ನು) ಹಿಂದಕ್ಕೆ ಕೊಡನು, ತನ್ನ ಕಾರ್ಯದಲ್ಲಿ ಕೊಂಕನು (ಎಲ್ಲರೂ ಒಂದಲ್ಲ ಒಂದು ದಿನ ದೇಹವನ್ನು ಬಿಡಲೇಬೇಕು, ದೇಹ ಅಗ್ನಿದೇವನ ಪಾಲು ಎಂದು ತಾತ್ಪರ್ಯ) ; ಹೀಗಿರುತ್ತ, ನಾನು ನಿಮ್ಮನ್ನು ನಂಬಿದ್ದೇನೆ, ನಿಮ್ಮನ್ನು ನಾನು ಬಿಡುವುದಿಲ್ಲ, ನನ್ನನ್ನು ನೀನಿರುವ ಎಡೆಗೆ ಕರೆದುಕೊಂಡು ಹೋಗು ; ಹೇಗಾ ದರೂ ಸರಿಯೆ, ಸಂಸಾರಸಾಗರವನ್ನು ದಾಟಿಸು. ಎಲೈ ಚಂದ್ರಚೂಡಾಮಣೀ, ನನ್ನ ಸ್ವಾಮಿಯೆ, ಯಾವ ಸಂದರ್ಭದಲ್ಲೂ ನನ್ನನ್ನು ನಿನ್ನಲ್ಲಿ ಸೇರಿಸಿಕೋ.

ಒಯ್–ತೆಗೆದುಕೊಂಡು ಹೋಗು. ಮಾಲು–ಕೊಂಕು, ವಕ್ರವಾಗು, ಹಿಂದೆಗೆ. ಅನಲ–ಅಗ್ನಿದೇವ. ಒಳಕೊಳ್–ಒಳಗೊಳ್ಳು; ಸೇರಿಸಿಕೊಳ್ಳು. ಮದೀಶ–ನನ್ನ ಒಡೆಯ, ಸ್ವಾಮಿ.

ಒಡಲಿಂಗಾತ್ಮಭವಂಗೆ ತಳ್ತೊಡರ್7[ಗಿ]7ಷ್ಟಂಗಾಪ್ತವರ್ಗಕ್ಕೆ ತ-
ಳ್ತೊಡಗೂಡಿರ್ದ ಮನಃಪ್ರಿಯಪ್ರತತಿಗೆಟ್ಟಿರ್ಪೊಂದಲಿಂ8 ಭಕ್ತಿ9ಯಿಂ9
ಪ್ಪೊಡ ನಿಮ್ಮಂ ಸಲೆ ಕೂಡುತಿರ್ಕೆ 10ಜಗ10ದೊಳ್ಮತ್ತನ್ಯರಾರ್ನಿನ್ನ ಕಾ-
ಲ್ವಿಡಿವೆಂ ಮಾಡಿಪನಾವಗಂ ಕರುಣದಿಂ ಶ್ರೀ ಚಂದ್ರಚೂಡಾಮಣೀ . ೮೭

---

1 ಮೊ (ತಿಮ) 2 ರ್ದಮೂ (ಮ) 3 ರೆ 4 ನೆ 5 ತಾನಡಿಗೆ (ಅಮ)
6 ನೆತ್ತಂಪೊಯ್ಸು 7 ನಿ 8 ಗಳ್ಗೊಂದ (ಮ) 9 ಇಂ (ಮ) 10 ಖಗ (ಮ)

೮೭ ನನ್ನ ದೇಹಕ್ಕಾಗಿ, ನನ್ನ ಮಗನಿಗಾಗಿ, ನನ್ನೊಡನಿರುವ ಸಮಸ್ತ ಒಡವೆಗಾಗಿ, ನನಗೆ ಇಷ್ಟರಾದವರಿಗಾಗಿ, ಆಪ್ತವರ್ಗಕ್ಕಾಗಿ, ಬಿಡದೆ ಜೊತೆಗೂಡಿರುವ ನನ್ನ ಪ್ರೀತಿಗೆ ಪಾತ್ರರಾದವರಿಗಾಗಿ, ಜನ್ಮವೆತ್ತುವ ಒಂದು ಕಷ್ಟದಿಂದ (ನನ್ನನ್ನು ಪಾರು ಮಾಡು); ಎಳ್ಳೈ ವೃಡನೆ, ಶ್ರೀ ಚಂದ್ರಚೂಡಾಮಣೀ. (ನನ್ನ ಮನಸ್ಸು ಭಕ್ತಿಯಿಂದ) ನಿಮ್ಮನ್ನು ಚೆನ್ನಾಗಿ ಕೂಡುತ್ತಿರಲಿ; ನಿನ್ನನ್ನು ಬಿಟ್ಟರೆ ಜಗತ್ತಿನಲ್ಲಿ ನನಗೆ ಬೇರೆ ಯಾರಿದ್ದಾರೆ? ನಿನ್ನ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ, ಕರುಣೆಯಿಂದ ಈ ಒಂದು ಬೇಡಿಕೆಯನ್ನು ಯಾವಾಗಲೂ ನಡಸಿಕೊಡು.

ಆತ್ಮಭವ-ಮಗ. ಒಡನೆ-ಐಶ್ವರ್ಯ; ಆಭರಣ. ಪ್ರತತಿ-ಸಮೂಹ. ಎಟ್ಟಿರ್-ಎದ್ದುಬರು.

ಕ್ರಿಯೆಯಂ ನಿಚ್ಚಳಚಿತ್ಪ್ರಕಾಶರುಚಿ ಬಿಟ್ಟಂದೊಪ್ಪುಗುಂ ಚುಂಬಕ
ಕ್ರಿಯೆ[ಯಂ][1] ಬಿಟ್ಟಡೆ ಬಿಟ್ಟನಾವುದುಮನಗ್ನಿಸ್ತಂಭಮಂ ಬಲ್ಲನ-
ಗ್ನಿಯನಕ್ಲೇಶದಳುರ್ಕೆಯಿಂ ಪಿಡಿವವೊಲ್ ಮತ್ತೊಬ್ಬ ತಾಂ ಬುದ್ಧಿನಿ-
ಶ್ಚಯದಿಂದಂ ಪಿಡಿಯಲ್ಕೆ ಕಿಚ್ಚು ಸುಡದೇ ಶ್ರೀ ಚಂದ್ರಚೂಡಾಮಣೀ ೮೮

೮೮ ತನ್ನಲ್ಲಿ ಸ್ಥಿರವಾದ ಚೈತನ್ಯರೂಪಿ ಪ್ರಕಾಶವು (ಚಿಜ್ಜ್ಯೋತಿ, ಜ್ಞಾನಪ್ರಕಾಶ) ಬೆಳಗುತ್ತಿರುವಾಗ (ಚಿತ್ತಶುದ್ಧಿಗಾಗಿ ಮಾಡುವ ಮತ್ತು ಧಾರ್ಮಿಕ ಅಗತ್ಯಗಳ ಪೂರೈಕೆಗಾಗಿ ಮಾಡುವ) ಕ್ರಿಯೆಗಳನ್ನು (ಕರ್ಮಗಳನ್ನು) ಮಾಡದೆ ಬಿಟ್ಟರೂ ಬಿಡಬಹುದು; ಆಗ ಅದು ಒಪ್ಪುತ್ತದೆ. (ಜ್ಞಾನಿಯಾದವನು ಕರ್ಮಗಳನ್ನು ಮಾಡದೆ ಬಿಡಬಹುದು ಎಂದು ತಾತ್ಪರ್ಯ). (ಜ್ಞಾನಸಿದ್ಧಿಯಾಗದೆ) ಕೇವಲ ಪ್ರದರ್ಶನಕ್ಕಾಗಿ, ಆಕರ್ಷಣೆಗಾಗಿ ಮಾಡುವ ಕರ್ಮಗಳನ್ನು ಮಾಡದೆ ಬಿಟ್ಟರೆ ಏನನ್ನೂ ಬಿಟ್ಟಹಾಗಾಗುವುದಿಲ್ಲ. ಅಗ್ನಿಸಂಭನ ವಿದ್ಯೆಯನ್ನು ಬಲ್ಲವನು ಅದು ತನ್ನನ್ನು ಸುಟ್ಟು ಬಾಧೆಪಡಿಸದ ರೀತಿಯಲ್ಲಿ ಅದನ್ನು ಹಿಡಿದುಕೊಳ್ಳುವ ರೀತಿಯಲ್ಲಿ ಮತ್ತೊಬ್ಬನು ಬುದ್ಧಿಪೂರ್ವಕವಾಗಿ (ಅದು ಸುಡುತ್ತದೆ ಎಂದು ತಿಳಿದೂ ತಿಳಿದು) ಅದನ್ನು ಹಿಡಿದುಕೊಂಡರೆ ಬೆಂಕಿ ಅವನಕೈಯನ್ನು ಸುಟ್ಟೇ ಸುಡುತ್ತದೆ. ["ನ ಚ ಪ್ರಮಾಣಾಂತರ ವಿರುದ್ಧಾರ್ಥ ವಿಷಯೇ ಶ್ರುತೇಃ ಪ್ರಾಮಾಣ್ಯಂ ಕಲ್ಪ್ಯತೇ, ಯಥಾ ಶೀತೋಽಗ್ನಿಃ ಕ್ಲೇದಯತೀತಿ—ಬೃಹದಾರಣ್ಯಕ ಶ್ರೀ ಶಂಕರಭಾಷ್ಯ (3–3–1)]

ಚಿತ್ಪ್ರಕಾಶ – ಚೈತನ್ಯದ ಜ್ಯೋತಿ, ಆತ್ಮದ ಬೆಳಕು. ಚುಂಬಕಕ್ರಿಯೆ – ಆಕರ್ಷಕ ಕರ್ಮ; ಮೋಸ, ವಂಚನೆ. ಅಗ್ನಿಸ್ತಂಭ – ಮಂತ್ರಶಕ್ತಿಯಿಂದ ಅಗ್ನಿಯು ಸುಡುವ ಶಕ್ತಿಯನ್ನು ನಿಲ್ಲಿಸಿಬಿಡುವುದು. ಕಿಚ್ಚು–ಉರಿ, ಅಗ್ನಿಜ್ವಾಲೆ; ಬೆಂಕಿ.

ಗುರುವಾಕ್ಯಂ ಮೊದಲಾಗಲಂಘ್ಯಮೆನೆ ವೇದಂ ದೇವ+ಸಾಕ್ಷಾಜ್ಜಗ-
ದ್ಗುರುವಾಗಿರ್ದು ಭವತ್ಪ್ರಚಃಪ್ರಚಯಮಾರ್ಗಾಲಂಘ್ಯಮೆಂದುಮ್ಮದೋ-
ತ್ಕರದೊಳ್ವಾಸಿಸೆ ವೇದಬಾಹ್ಯವೆಸಿಪಾ ದುರ್ಬುದ್ಧಿಯಿಂ ದೇವದೇ-
ವರ ಮಾತಂ ಸಲೆ ಮೀಱಿದಾತನೆ ವಲಂ ಶ್ರೀ ಚಂದ್ರಚೂಡಾಮಣೀ ೮೯

---

1 ಯಿಂ +ಸ್ವಾನ

೮೯ ಗುರುವಾಕ್ಯವು ಅಲಂಘ್ಯ ಎಂದು ವೇದ ಹೇಳುತ್ತಿರುವಾಗ, ದೇವನಾದ ನೀನು ಸಾಕ್ಷಾತ್ ಜಗದ್ಗುರುವಾಗಿರುವಲ್ಲಿ, ನಿನ್ನ ವಚನ ಸಮುಚ್ಚಯವು ಹಾಕಿಕೊಟ್ಟ ಮಾರ್ಗವು ಕೂಡ (ಎಂದರೆ ಶೈವಾಗಮ ?) ಅಲಂಘ್ಯವೆ. ಹೀಗಿರುವಾಗ, ನಾನಾ ಬಗೆಯ ಮದಗಳಿಂದ ಕೂಡಿ ಅದರಲ್ಲಿಯೇ ಮುಳುಗಿದ್ದರೆ, ವೇದಬಾಹಿರವೆನಿಸುವ ದುರ್ಬುದ್ಧಿಯಿಂದ ಅಂಥವನು ದೇವಾಧಿದೇವನಾದ ಶಿವವಚನವನ್ನು ಖಂಡಿತವಾಗಿ ಮೀರಿದವನೇ ಸರಿ.

ಅಲಂಘ್ಯ–ದಾಟಲಾಗದ್ದು, ಮೀರಲಾಗದ್ದು. ವಚಃಪ್ರಚಯ–ವಚನಸಮೂಹ. ಉನ್ಮ್ಮದ (ಉನ್ಮದ <)–ಅತಿಯಾದ ಮದ. ಮದೋತ್ಕರ–ಮದಗಳ ಸಮೂಹ (ಧನಮದ, ಯೌವನಮದ, ರೂಪಮದ, ಮುಂತಾದವು).

ಪೆಱನುಂಡಂ ಪೆಱನುಟ್ಟಪಂ ಪೆಱನತರ್ಕ್ಯೈಶ್ವರ್ಯಮುಂ ತಾಳ್ದಿದಂ
ಪೆಱನುದ್ದಾಮಪರಾಕ್ರಮಕ್ಕೆ ನೆಲೆಯಾಗಿರ್ದಪ್ಪನೆಂದಾಗಳುಂ
ಕಱು[1][ಬಿಂ][1]ದಂದಶನಕ್ಕೆ ಮೇಲೆ ಸಲವೆಂದೋರಂತೆ ತನ್ನಂತೆ ತಾಂ
ಪೆಱರಂ ಭಾವಿಸೆ ತತ್ತ್ವಮಿಂತುಟಿ ವಲಂ ಶ್ರೀ ಚಂದ್ರಚೂಡಾಮಣೀ ೯೦

೯೦ ಬೇರೊಬ್ಬ ಉಂಡು ಸುಖವಾಗಿದ್ದಾನೆ, ಮತ್ತೊಬ್ಬ ಸೊಗಸಾದ ಉಡುಪು ಧರಿಸುತ್ತಾನೆ, ಇನ್ನೊಬ್ಬ ಅಖಂಡ ಐಶ್ವರ್ಯವನ್ನು ಹೊಂದಿದ್ದಾನೆ, ಇನ್ನೊಬ್ಬ ಉನ್ನತ ಪರಾಕ್ರಮವುಳ್ಳವನಾಗಿದ್ದಾನೆ ಎಂದು ಯಾವಾಗಲೂ ಅಸೂಯೆಯಿಂದ (ಕೊರಗದೆ), ಅಂದಂದಿನ ಊಟಕ್ಕಿಂತ ಹೆಚ್ಚಿನವು ಬೇಡ ಎಂದು ಒಂದೇ ಸಮನಾಗಿ ತನ್ನ ವಿಷಯದಲ್ಲಿ ತಾನು ಹೇಗೆ ಭಾವಿಸಿಕೊಳ್ಳುವನೋ ಇತರರ ವಿಷಯ ದಲ್ಲಿಯೂ ಹಾಗೆಯೇ ಭಾವಿಸಿದರೆ, ನಿಶ್ಚಯವಾಗಿಯೂ ತತ್ತ್ವ ಎಂದರೆ ಇಷ್ಟೆ, ಶ್ರೀ ಚಂದ್ರಚೂಡಾಮಣೀ. (ಎಲ್ಲರಲ್ಲಿಯೂ ಬ್ರಹ್ಮವೇ ಇರುವುದರಿಂದ ತಾನು ಬೇರೆ ಅಲ್ಲ ಇತರರು ಬೇರೆ ಅಲ್ಲ ಎಂದು ಸರ್ವಸಮಾನತಾಭಾವವನ್ನು ಬೆಳಸಿ ಕೊಂಡರೆ ಅದೇ ತತ್ತ್ವಜ್ಞಾನ ಎಂದು ತಾತ್ಪರ್ಯ).

ಅತರ್ಕ್ಯ – ಊಹಿಸಲಸಾಧ್ಯವಾದ. ಕಱುಬು – ಅಸೂಯೆ. ಅಶನ–ಆಹಾರ, ಊಟ. ಸಲವು-ಅವಕಾಶ, ಎಡೆ, ಅಗತ್ಯ. ಓರಂತೆ–ಒಂದೇ ಸಮನಾಗಿ.

ಗುರುವುಂ ತಂದೆಯುಮಾಪ್ತನುಂ ಜನನಿಯುಂ ಮತ್ಸ್ವಾಮಿಯುಂ ದೈವಮುಂ
ಹರ ನೀನೆಂದೆರಡಿಲ್ಲದಾಂ ಬಗೆವುತಿರ್ದೆಂ ತೊ[2][ಟ್ರು][2]ವೊಕ್ಕೆಮ್ಮಹೇ-
ಶ್ವರ ನೀಂ ರಕ್ಷಿಪ್ಪುದೆನ್ನನಾಶ್ರಿತ ಜನ ಪ್ರಾಕಾರನೆಂಬೊಂದು ನಾ-
[3][ಟ್ಟಿ][3]ರುದಂ ತೋರೆನಗಾಶ್ರಿತಂಗೆ ದಯೆಯಿಂ ಶ್ರೀ ಚಂದ್ರಚೂಡಾಮಣೀ ೯೧

---

1 ಪೆಂ 2 ತ್ತು (ಮು), ಳ್ತು (ಅ). 3 ಣ್ಬೆ

೯೧ ಎಲೈ ಹರನೇ, ನೀನೆ ನನ್ನ ಗುರು, ತಂದೆ, ಆಪ್ತ, ತಾಯಿ, ಒಡೆಯ, ದೈವ ಎಂದು ನಿರ್ವಂಚನೆಯಾಗಿ ಭಾವಿಸುತ್ತಿದ್ದೇನು. ನಾನು ನಿನ್ನ ತೊತ್ತಾಗಿದ್ದೇನೆ; ನೀನು ನನ್ನನ್ನು ಕಾಪಾಡಬೇಕು. ಮರೆಹೊಕ್ಕ ಜನಕ್ಕೆ ಕೋಟೆಯ ಗೋಡೆ ಯಂತೆ ರಕ್ಷಕ ಎಂಬ ನಿನ್ನ ಲೋಕಪ್ರಸಿದ್ಧವಾದ ಬಿರುದನ್ನು ನಿನ್ನ ಆಶ್ರಿತನಾದ ನನಗೆ ಕೃಪೆಯಿಟ್ಟು ತೋರು, ಶ್ರೀ ಚಂದ್ರಚೂಡಾಮಣೀ.

ಎರಡಿಲ್ಲದೆ – ನಿರ್ವಂಚನೆಯಾಗಿ, ಏಕೀಭಾವದಿಂದ. ಬಗೆ – ಆಲೋಚಿಸು, ಭಾವಿಸು. ಪ್ರಾಕಾರ–(ಕೋಟೆಯ) ಗೋಡೆ; ರಕ್ಷಕ. ತೊಟ್ತುವೋಗು–ದಾಸನಾಗು, ತೊತ್ತಾಗು. ನಾಟ್ಟಿರುದು – ನಾಡು (ಎಂದರೆ ನಾಡಿನ ಜನ) ಕೊಟ್ಟ ಬಿರುದು; ಲೋಕಪ್ರಸಿದ್ಧವಾದ ಬಿರುದು.

ತನಗೊಳ್ಪಂ ತನಗಟ್ಟಿಯಂ ತನಗನಂತೈಶ್ವರ್ಯ ಸಂಪತ್ತಿಯಂ
ತನಗಿಷ್ಟಾರ್ಥಸುಖಂಗಳಂ ತನಗೆ ಲೋಕಾಶ್ಚರ್ಯಮಂ ಧೈರ್ಯಮಂ
ತನಗತ್ಯುಜ್ವಳ ಕೀರ್ತಿಯಂ ಬಯಸುವಾತಂ ಮಾಟ್ಪುಶಾಂತಿತ್ವನಿ-
ನ್ನೆನಗಕ್ಕುಂ ನೆ¹[ಱೆ]¹ದಪ್ಪೆನಾ ಶಮತೆಯೊಳ್ ಶ್ರೀ ಚಂದ್ರಚೂಡಾಮಣೀ ೯೨

೯೨ ತನಗೆ ಒಳ್ಳೆಯದನ್ನು, ತನಗೆ ಪ್ರೀತಿಯನ್ನು, ತನಗೆ ಕೊನೆಮೊದಲಿಲ್ಲದ (ಅಪಾರ) ಐಶ್ವರ್ಯಸಮೃದ್ಧಿಯನ್ನು, ತನಗೆ ತಾನು ಬಯಸಿದ ಸುಖಗಳನ್ನು, ತನಗೆ ಲೋಕದ ಐಶ್ವರ್ಯವನ್ನು (ತಾನು ನೋಡಿ, ಅನುಭವಿಸಿ, ಆಶ್ಚರ್ಯಪಡಬಹುದುದಂಥಾದ್ದನ್ನು), ಧೈರ್ಯವನ್ನು, ಅತ್ಯಂತ ಉಜ್ವಲವಾದ ಕೀರ್ತಿಯನ್ನು ಬಯಸುವವನು (ಅವು ತನಗೆ ಪ್ರಾಪ್ತವಾದಮೇಲೆ) ಪಡೆಯುವ ಒಂದು ಶಾಂತಸ್ಥಿತಿ ನನಗೆ ಉಂಟಾಗುವುದು. ಆ ಶಾಂತಸ್ಥಿತಿಯಲ್ಲಿ ನಾನು ಸೇರಿಹೋಗುತ್ತೇನೆ. (ಐಹಿಕ ಸುಖಭೋಗಗಳು ಪ್ರಾಪ್ತವಾದಾಗ ಮನಸ್ಸಿಗೆ ಒಂದು ಬಗೆಯ ನೆಮ್ಮದಿ ಉಂಟಾಗುತ್ತದೆ. ಬಯಸಿದ ಶಿವಸಾನ್ನಿಧ್ಯ ದೊರೆತಾಗ ಅನುಭವಿಸುವ ನೆಮ್ಮದಿ ಅತಿಶಯವಾದದ್ದು).

ಒಳ್ಪು–ಒಳ್ಳೆಯದು. ಅಟ್ಟಿ–ಪ್ರೀತಿ. ಅಕ್ಕುಂ–ಉಂಟಾಗಲಿ. ಶಮತೆ–ಶಾಂತ ಸ್ಥಿತಿ. ನೆಱೆ[3]–ಕೂಡಿಕೋ, ಸೇರು.

ಹರ ನೀಂ ವಿಶ್ವಜನಕ್ಕೆ ಕರ್ತೃ ಧರಣೀ ನೀರಗ್ನಿ ಸೂರ್ಯಾನಿಳಾಂ-
ಬರ ಚಂದ್ರಾತ್ಮಕ ಮೂರ್ತಿಯೆಂದು ನುಡಿಗುಂ ವೇದಂಗ²[ಳ್]² ವಸ್ತುವಿಂ
ಪರಮಾತ್ಮಂ ಪೆಱತೊರ್ವರಿಲ್ಲದೊಳರೇ³[ಮಾ]³ಹೇಶ ⁴[ನೀಂ]⁴ ಜ್ಞಾನ ಬಾ-
ಹ್ಯರನೇಳಿಪ್ಪರು ನಿಮ್ಮನೇಳಿಸುವರ್ ಶ್ರೀ ಚಂದ್ರಚೂಡಾಮಣೀ ೯೩

---

1 ರ 2 ಳಂ 3 ಮ 4 ನೀ

೯೩ ಎಲೈ ಹರನೇ, ಸಮಸ್ತ ಜನಕ್ಕೂ (ಎಲ್ಲವನ್ನೂ ಕೊಡುವ) ಕರ್ತೃ (ಯಜ್ಞಕರ್ತೃ, ಯಜಮಾನ) ಆಗಿದ್ದೀಯೆ; ಭೂಮಿ, ನೀರು, ಅಗ್ನಿ, ಸೂರ್ಯ, ವಾಯು, ಆಕಾಶ, ಚಂದ್ರ – ಇವನ್ನು ಒಳಗೊಂಡ ಅಷ್ಟಮೂರ್ತಿಯಾಗಿದ್ದೀಯೆ. ಹಾಗೆಂದು ವೇದಗಳು ಹೇಳುತ್ತಿವೆ. ಈ ವಸ್ತುಗಳಿಗಿಂತಲೂ ಪರಮಾತ್ಮ ಎನ್ನಿಸಿಕೊಂಡವರು ಬೇರೊಬ್ಬರು ಇದ್ದಾರೆಯೇ? ನೀನು ಮಹೇಶ. ಜೈನ ಬೌದ್ಧರನ್ನು ನಿಂದಿಸಿದವರು ನಿಮ್ಮನ್ನು ನಿಂದಿಸಿದವರು (ಆಗುವರು). (ಜೈನಬೌದ್ಧಮತೀಯರನ್ನು ನಿಂದಿಸಿದರೆ ನಿಮ್ಮನ್ನು ನಿಂದಿಸಿದ ಹಾಗಾಗುತ್ತದೆ ಎಂಬ ಮಾತಿನಿಂದ ಕೃತಿಕರ್ತೃ ಜೈನ ಬೌದ್ಧ ಮತಗಳ ಬಗೆಗೆ ಗೌರವ ಹೊಂದಿದ್ದವನು ಎಂದು ಊಹಿಸಬಹುದು. ಜೈನನೇ ಆಗಿರಬಹುದೆ?)

ಅಷ್ಟಮೂರ್ತಿ–ಶಿವ: ಪಂಚಭೂತಗಳು, ಸೂರ್ಯಚಂದ್ರರು ಮತ್ತು ಹೋತೃ ಆಗಿರುವವನು. ಧರಣಿ–ಭೂಮಿ. ಅನಿಲ(ಳ)–ವಾಯು. ಅಂಬರ–ಆಕಾಶ. ಏಳಿಸು–ನಿಂದಿಸು.

ಸಮಸಂದಾಕೃತಿ ಸಾರ್ದ ರೂಪು ಪಡೆದರ್ಥಂ ತಂದೆ ಪೆಂಡಿರ್ಯ[1][ಥಾ][1]
ಕ್ರಮದಿಂ ಪುಟ್ಟಿದ ಪುತ್ರರಾದ ನಿಜ ಮಿತ್ರರ್ಸಾಲ್ಗುಮೆಂದಿರ್ದನಂ-
ಗಮರ್ದಿರ್ಕ್ಕುಂ ಪರಿಣಾಮಮಿಲ್ಲದವನೆಲ್ಲಾ ಚಿಂತೆಯೊಳ್ ಕೂಡಿಕೂ-
ಡಿ ಮರುಳ್ಗೊಳ್ಗುಮದೆಯ್ದದಾಗದು ಸುಖಂ ಶ್ರೀ ಚಂದ್ರಚೂಡಾಮಣೀ ೯೪

೯೪ ಓರೆಕೋರೆಯಿಲ್ಲದೆ ಸಮವಾದ ಆಕೃತಿಯಿಂದ ಕೂಡಿದ ರೂಪು, ಪಡೆದುಕೊಂಡ ಧನ, ತಂದೆ, ಹೆಂಡಿರು, ಯಥಾಕ್ರಮವಾಗಿ ಹುಟ್ಟಿದ ಗಂಡುಮಕ್ಕಳು, ಒದಗಿಬಂದ ನಿಜವಾದ ಸ್ನೇಹಿತರು—ಇಷ್ಟು ಸಾಕು ಎಂದು ತೃಪ್ತಿಪಟ್ಟುಕೊಂಡವನಿಗೆ ಪರಿಣಾಮ (ಅವಸಾನ, ಸಾವು) ಮೇಲೆ ಎರಗುತ್ತದೆ. ಅವು ಯಾವವೂ ಇಲ್ಲದವನು ಎಲ್ಲ ಬಗೆಯ ಚಿಂತೆಯಲ್ಲಿ ಮುಳುಗಿ ಹುಚ್ಚುಹಿಡಿದವನಾಗುತ್ತಾನೆ. ಏನೂ ಇಲ್ಲದಿರುವಾಗ ಹುಚ್ಚುಹಿಡಿಯದಿದ್ದ ಸಂದರ್ಭದಲ್ಲಿ, ಅದು ನಿಜವಾಗಿ ಸುಖವೇ, ಶ್ರೀ ಚಂದ್ರಚೂಡಾಮಣೀ.

ಸಮಸಂದಾಕೃತಿ – ವಕ್ರತೆಯಿಲ್ಲದ ಆಕಾರ. ಅಮರ್ – ಸೇರು, ಒದಗಿಬರು; ಆಕ್ರಮಿಸು. ಪರಿಣಾಮ – ಕೊನೆ, ಅವಸಾನ; ಸಾವು. ಮರುಳ್–ಬುದ್ಧಿಭ್ರಂಶ; ಹುಚ್ಚು.

ಮನವೊಂದಂ ಬಗೆಗುಂ ಕುಬುದ್ಧಿ ಪೆಱತೊಂದಂ ಭಾವಿಕುಂ ಚಿತ್ತಮೊಂ-
ದನೊಡಱಲ್ಪಾಲಿಸುತಿರ್ಕುಮಿಂತಿವಜನಂತಭ್ರಾಂತಿಗಾನಾಱಿನೊಂ-
ದನುಸಾದಾಗಳುಮೆತ್ತಲುಂ ತೊಲಗದೇಕೀಭಾವದೊಳ್ ನಿಂದು ನೆ-
ಟ್ಟನೆ ಬಿಲ್ಲುಂಬೆಱಗಾಗೆ ನಿಮ್ಮೊಳೆ ಮನಂ ಶ್ರೀ ಚಂದ್ರಚೂಡಾಮಣೀ ೯೫

---

1 ಮಾ

೯೫ ಮನಸ್ಸು ಒಂದನ್ನು ಆಲೋಚಿಸುತ್ತದೆ; ಕೆಟ್ಟಬುದ್ಧಿ ಬೇರೊಂದನ್ನು ನೆನೆಯುತ್ತದೆ. ಚಿತ್ತವಾದರೋ ಯಾವುದೋ ಒಂದನ್ನು ಮೋಹಿಸಿ ಅದನ್ನೇ ಕುರಿತು ಚಿಂತಿಸುತ್ತಿರುತ್ತದೆ. ಈ ಬಗೆಬಗೆಯ ಕೊನೆಮೊದಲಿಲ್ಲದ ಚಿತ್ತಭ್ರಾಂತಿಗಳಲ್ಲಿ ಒಂದನ್ನೂ ನಾನು ಸಹಿಸಲಾರೆನು. ಆದ್ದರಿಂದ, ನನ್ನ ಮನಸ್ಸು ಯಾವಾಗಲೂ ಯಾವಲ್ಲಿಗೂ (ನಿಮ್ಮನ್ನು) ಬಿಟ್ಟುಹೋಗದೆ ಅತ್ಯಾಶ್ಚರ್ಯ ಎನ್ನುವಂತೆ ನಿಮ್ಮಲ್ಲಿಯೇ ಮಗ್ನವಾಗಿ ನೆಲಸಿಸುವುದು.

ಕುಬುದ್ಧಿ–ಕೆಟ್ಟಬುದ್ಧಿ. ಒಲಿಲ್–ಪ್ರೀತಿಸು, ಮೋಹಿಸು. ಭ್ರಾಂತಿ–ಕೈಗೂಡದ ಕಲ್ಪನೆ; ಮನಸ್ಸಿನ ಸುತ್ತಾಟ, ಅಲೆದಾಟ. ಏಕೀಭಾವ–ತಾದಾತ್ಮ್ಯ; ಮಗ್ನತೆ.

ಪಲಕಾಲಂ ಸುಖಮಿರ್ದೊಡಂ ಪಲವು ಕಾಲಂ ಬಂದೊಡಂ ದೇವ ಕೋ-
ಟಲೆಯೊಳ್ಪುಟ್ಟುವೆ ನೋವೆ ನೋಯಿಸುಗುಮಾ ಮುನ್ನಾದ ಸೌಖ್ಯಂ ಮನಂ
ಬಲಮುಂ ಮಾಡದೊಡೆಂತು[1][ಮಂ][1]ಧಕನ ಕೈಯುಂ ಬಿಟ್ಟೊಡಾತಂಗೆ ನು-
ಣ್ಗೊಲೆಯುಪ್ಪಂತಿವನಾವಗಂ ತಿಳಿದೆ ನಾಂ ಶ್ರೀ ಚಂದ್ರಚೂಡಾಮಣೀ ೯೬

೯೬ ಹಲವು ಕಾಲ (ದೀರ್ಘಕಾಲ) ಸುಖವಾಗಿದ್ದರೂ ಕೂಡ, ಹಲವು ಸಲ (ಹುಟ್ಟಿ) ಬಂದರೂ ಕೂಡ, ದೇವಾ, ಘಾಸಿಗೊಳಗಾಗಿಯೇ ಹುಟ್ಟುವೆನು. ಹಿಂದೆ ಪಟ್ಟ ಸುಖಾನುಭವ ಮನಸ್ಸಿಗೆ ನೋವನ್ನೇ ಉಂಟುಮಾಡುವುದು. ಮನಸ್ಸು (ಸುಖಕ್ಕಾಗಿ ಆಸೆಪಡದೆ) ದೃಢವಾಗಿದ್ದರೆ, ಕುರುಡನ ಕೈಯನ್ನು ಬಿಟ್ಟುಬಿಟ್ಟರೆ ಆತನು ಎಲ್ಲಿಯಾದರೂ ಎಡವಿಬಿದ್ದು ಆತನಿಗೆ ಅನಾಯಾಸವಾದ (?) ಮರಣ ಉಂಟಾಗುವುದು. ಇದನ್ನು ನಾನು ಅರಿತಿದ್ದೇನೆ. (ನಿರಂತರ ಸುಖ ಒಳಗಣ್ಣನ್ನು ಕುರುಡುಮಾಡುತ್ತದೆ; ನಿಜವಾದ ಆಂತರಿಕ ಸುಖವನ್ನು ಕೊಡುವ ದೈವಬಲ ತಪ್ಪುತ್ತದೆ. ಇಂಥವನಿಗೆ ಅಧಃಪತನ ಖಂಡಿತ. ಇದಿಷ್ಟು ಈ ಪದ್ಯದ ತಾತ್ಪರ್ಯವಾಗಿ ತೋರುತ್ತದೆ.)

ಕೋಟಲೆ–ತೊಂದರೆ, ಹಿಂಸೆ; ಘಾಸಿ. ನೋವು–ವ್ಯಥೆ. ಅಂಧಕ–ಕುರುಡ. ನುಣ್ಗೊಲೆ–ಹಿಂಸೆಯಿಲ್ಲದ ಅನಿರೀಕ್ಷಿತವಾದ ಮರಣ (?); ಆಕಸ್ಮಿಕ ಮರಣ (?)

ಇನಿತಕ್ಕಾಜದೊಳಿಲ್ಲ ಕೃಪೆಗೆ ಕಲ್ಪಾಂತಿನ್ನು ಜಿಹ್ವಂ ವಿನೂ-
ತನ ಸತ್ಯಕ್ಕೆ ಮರಲ್ವ ಸತ್ಯಮನಕೊರ್ರಂತೆ ಕೋಕ್ಕೈಸೆ ನಾ-
ಣ್ಬಿನೆ ಸತ್ಯಂ ಸುರರಾಜನ್ಮೋಕ್ಷವಿದು ತಾಂ ಮಾರ್ಗಕ್ಕೆ ಸೋಪಾನಮಂ-
ನ್ನೆನಗಾ ಸತ್ಯಮೆ ಕೂಡುಗಾವ ಶೀಲದಿಂ ಶ್ರೀ ಚಂದ್ರಚೂಡಾಮಣೀ ೯೭

1 ಮಂ

೯೭ ಇಷ್ಟಕ್ಕೆ ಸೈರಿಸಲಾರದೆ, ನನ್ನ ನಾಲಗೆ ಕಹಿಯನ್ನು ಸವಿದು ಅದಕ್ಕೆ ಹೇಸು ವಂತೆ, ಹೊಸದಾದ ಸತ್ಯಕ್ಕೆ (ಎಂದರೆ ಸತ್ಯಪಥಕ್ಕೆ) ಹಿಂದಿರುಗಿ, ಅಸತ್ಯವಚನಕ್ಕೆ (ಸುಳ್ಳಿಗೆ) ಅಸಹ್ಯಪಡುವುದನ್ನು ಬಿಟ್ಟೆನೇನು? ಸತ್ಯ ದೇವೇಂದ್ರನಿಗೂ ಮೋಕ್ಷವನ್ನು ಕೊಡತಕ್ಕದ್ದು. ಸನ್ಮಾರ್ಗಕ್ಕೆ ಸೋಪಾನ. ಯಾವ ರೀತಿಯಲ್ಲಾದರೂ ನನಗೆ ಆ ಸತ್ಯನಿಷ್ಠೆ ಪ್ರಾಪ್ತವಾಗಲಿ. (ಸುಖಾನುಭವವನ್ನು ಅಸತ್ಯ, ಮಿಥ್ಯೆ ಎಂದು ಭಾವಿಸಿದೆ. ನಿಜವಾದ ಸತ್ಯ, ಯಾವಾಗಲೂ ಇರತಕ್ಕ ಮೋಕ್ಷಪದವಿ).

ಕೈಪೆ–ಕಹಿ. ಕನಲು–ಸಿಟ್ಟುಗೊಳ್ಳು; ಕಿಡಿಕಾರು; ಕುಗ್ಗು.

ಪರಸೌಖ್ಯಂ ತನಗಾಗದೆಂದು ಪೆಱತೊಂದುದ್ಯೋಗದಿಂ ತನ್ನ ದು-
ರ್ಧರ ದುರ್ಬೋಧನದಿಂದೆ ಭೇದಿಸದೆ ಸರ್ವ ಪ್ರಾಣಿಯೊಳ್ಮಾಡಿ ತಾಂ-
ಪರವು ಪ್ರೀತಿಯನೋವುದಾವ ದೆಸೆಯಿಂ ತುಷ್ಟಾತ್ಮನಾಗಿರ್ಪ ತ-
ತ್ಪರಿಣಾಮಂ ಸಲೆ ಕೂಡುಗೆನ್ನ ಮನದೊಳ್ ಶ್ರೀ ಚಂದ್ರಚೂಡಾಮಣೀ ೯೮

೯೮ ಪರಲೋಕದ ಸುಖ ನನಗೆ ಲಭ್ಯವಿಲ್ಲ ಎಂದು ಭಾವಿಸಿ, ಬೇರೆ ಯಾವುದೋ ಒಂದು ವ್ಯರ್ಥ ಉದ್ಯೋಗವನ್ನು ಕೈಗೊಂಡು ತನ್ನ (ತಾನು ಪಡೆದ) ಹೊರಲಾಗದ ಕೆಟ್ಟ ಉಪದೇಶದಿಂದ ಆ ಭಾವನೆಯನ್ನು ಹೋಗಲಾಡಿಸಲು ಪ್ರಯತ್ನಪಡದೆ ಎಲ್ಲ ಪ್ರಾಣಿಗಳಲ್ಲೂ ಅತ್ಯಂತ ಪ್ರೀತಿಯನ್ನು ತೋರುತ್ತ ಕಾಪಾಡುವುದು. ಯಾವ ಕಡೆ ಯಿಂದಲಾದರೂ ಸಂತುಷ್ಟನಾಗಿರುವ ಒಂದು ಪರಿಣಾಮ ನನ್ನ ಮನಸ್ಸಿನಲ್ಲಿ ಕೂಡಿ ಕೊಳ್ಳಲಿ, ಹೇ ಚಂದ್ರಚೂಡಾಮಣೀ.

ಪರಸೌಖ್ಯ–ಪರಲೋಕಸುಖ, ಸ್ವರ್ಗಸುಖ. ದುರ್ಧರ–ಧರಿಸಲಾಗದ, ಹೊರಲಾಗದ, ತಾಳಲಾಗದ. ದುರ್ಬೋಧ–ಹೀನವಾದ ಉಪದೇಶ; ಕೆಟ್ಟ ತಿಳಿವಳಿಕೆ. ಓವು–ಸಲಹು, ಕಾಪಾಡು. ಪರಿಣಾಮ–ಫಲರೂಪದ ಸ್ಥಿತಿ.

ದಯೆಯಿಂ ವಿಶ್ವಜನಂಗಳೊಳ್ ಸಲುವ ಸರ್ವ ಪ್ರಾಣಿ [1][ಸುಸಂಖುದ್ಧಿ][1]ಯಂ
ಬಯಸುತ್ತಿರ್ಪ ಸುವಸ್ತುವಸ್ತುಗಳೊಳಂ ಕೂಡಿರ್ಪ ಸರ್ವಾತ್ಮ ಸಿ-
ದ್ಧಿಯನಾನೆಯ್ದಿದೆನೆಂಬ ನಿಮ್ಮನಱಿದಾಂ ನೀವಾದೆನೆಂದಿರ್ಪ ಬು-
ದ್ಧಿಯನೇ ದೇವರ ದೇವ ಬೇಡಿದನಿಮಂ ಶ್ರೀ ಚಂದ್ರಚೂಡಾಮಣೀ ೯೯

೯೯ ದಯೆಯಿಂದ ಕೂಡಿದವನಾಗಿ ಸಮಸ್ತ ಜನಕೋಟಿಯಲ್ಲಿ ಒಂದಾಗಿ ಸೇರಿ ಹೋಗಿರುವ ಎಲ್ಲ ಪ್ರಾಣಿಗಳ ಒಳಿತಿನ ಮೇಲ್ಮೆಯನ್ನು ಬಯಸುತ್ತ ಇರುವ, ಸತ್ಯ ವಾದ ವಸ್ತುಗಳಲ್ಲಿ ಕೂಡಿಕೊಂಡಿರುವ ಸರ್ವಾತ್ಮಸಿದ್ಧಿಯನ್ನು ನಾನು ಪಡೆದೆನು ಎಂಬ; ನಿಮ್ಮನ್ನು ಅರಿತು ನಾನು ನೀವೇ ಆದೆನು ಎಂದಿರುವ, ಈ ಒಂದು ತಿಳಿವಳಿಕೆ

1 ಸಮೃದ್ಧಿ

ಯನ್ನು, ಎಲೈ ದೇವರದೇವನಾದ ಶ್ರೀ ಚಂದ್ರಚೂಡಾಮಣೀ, ನಿಮ್ಮಲ್ಲಿ ಬೇಡಿ ಕೊಂಡಿದ್ದೇನೆ.

ಸುಸುಬುದ್ಧಿ–ಸಂಪದಭಿವೃದ್ಧಿ, ಏಳಿಗೆ, ಯಶಸ್ಸು. ಸರ್ವಾತ್ಮಸಿದ್ಧಿ–ಸರ್ವಕ್ಕೂ (ಜಗತ್ತಿನ ಚೇತನಾಚೇತನಗಳಿಗೂ) ಆತ್ಮಸ್ವರೂಪನಾದ ಪರಮಾತ್ಮಜ್ಞಾನದ ಪ್ರಾಪ್ತಿ; ಎಲ್ಲವೂ ಬ್ರಹ್ಮ, ತಾನೂ ಬ್ರಹ್ಮ ಎಂಬ ಅರಿವು. ಎಯ್ದು–ಸೇರು.

ಸಿರಿಯಕ್ಕಾಗ[1][ಡೆ][1] ಪೋ[2][ಗಲಕ್ಕೆ][2] ಬರಿಸಂ ಬಾಳ್ಗೆಗಳೇ ಪೋ[3][ಗುಗಾ][3]-
ಭರಣಂ ಸುತ್ತುಗೆ ಸಾವು ಪುಟ್ಟುಗಹಿತರ್ಬರ್ರಿಪ್ಪರೆಯ್ತುರ್ಕೆ ಕೇ-
ಸರಿ ಪಾಯ್ಗೆಂಗನೆ ಮೇಲೆವಾಯ್ಗೆ ನ[4][ದು][4]ಕೊಂಡುಂ ಭೇದಮಿಲ್ಲಿಲ್ಲಮುಂ
ಸರಿಯಾಗಲ್ ಸಲೆ ಕಾಣ್ಬೆಸಕ್ಕೆ ಮನದೊಳ್ ಶ್ರೀ ಚಂದ್ರಚೂಡಾಮಣೀ ೧೦೦

೧೦೦ ಐಶ್ವರ್ಯ ಉಂಟಾಗಲಿ, ಅದು ಲಭಿಸಿದೊಡನೆಯೇ ನಾಶವಾಗಿ ಹೋಗಲಿ; (ಕೈಗೆ ಬಂದ) ಒಡವೆ ವರ್ಷಕಾಲ ಬಳಿ ಇರಲಿ, ಈಗಲೇ ಹೊರಟುಹೋಗಲಿ; ಸಾವು ಸುತ್ತಿಕೊಳ್ಳಲಿ, ಮತ್ತೆ ಹುಟ್ಟುವುದಾಗಲಿ; ಶತ್ರುಗಳೇ (ನನ್ನಲ್ಲಿಗೆ) ಬರಲಿ, ಇಷ್ಟರಾದವರು ಬರಲಿ; ಸಿಂಹವೇ ಬಂದು ಮೇಲೆ ಬೀಳಲಿ, ಹೆಣ್ಣೇ (ಬಂದು) ಮೇಲೆ ಬೀಳಲಿ—ಈ ಯಾವುದರಲ್ಲಿಯೂ ಭೇದವೆಣಿಸದೆ ಎಲ್ಲವನ್ನೂ ಸಮವಾಗಿ ನನ್ನ ಮನಸ್ಸಿನಲ್ಲಿ ಕಾಣುವ ಸರ್ವಸಮಭಾವ ಉಂಟಾಗಲಿ, ಎಲೈ ಶ್ರೀ ಚಂದ್ರಚೂಡಾಮಣೀ.

ಆಗಡೆ–ಆಗಳೆ(ಲೆ). ಅಕ್ಕೆ–ಆಗಲಿ. ಬರಿಸ–ವರ್ಷ. ಪೋಗುಗೆ–ಹೋಗಲಿ. ಅಹಿತರ್ಬರ್–ಅಹಿತರ್, ಹಿತನಲ್ಲದವರು; ಶತ್ರುಗಳು. ಎಯ್ತುರ್–ಬರು. ಕೇಸರಿ–ಸಿಂಹ. ಅಂಗನೆ–ಹೆಣ್ಣು.

ಬಗೆಯೆಲ್ಲಂ ನಿಜ ಯೋಗಮಕ್ಕೆ ನುಡಿಯೆಲ್ಲಂ ನಿಮ್ಮ ಮಂತ್ರಾಕ್ಷರಾಂ-
[5][ದ][5]ಗಳಕ್ಕೆನ್ನರಿವೆಲ್ಲ ವಿಶ್ವಮಯ ದಿವ್ಯಜ್ಞಾನಮಕ್ಕೆಲ್ಲಿಯುಂ
ನೆಗಳ್ದಾಲೋಕನಮೆಲ್ಲಮೆಯ್ದೆ ಶಿವತತ್ತ್ವಾಲೋಕಮಕ್ಕೆಂತಿವಂ
ಬಗೆದಾಂ ಬೇಡುವೆನೊಲ್ದಿನಿಸ್ನಿಬಿಡಮಂ ಶ್ರೀ ಚಂದ್ರಚೂಡಾಮಣೀ ೧೦೧

೧೦೧ ನನ್ನ ಮನಸ್ಸೆಲ್ಲವೂ ಯೋಗಮಯವಾಗಲಿ; ನನ್ನ ಮಾತೆಲ್ಲವೂ ನಿಮ್ಮ ಬೇರೆ ಬೇರೆ (ಶಿವ)ಮಂತ್ರಾಕ್ಷರಗಳಾಗಲಿ; ನನ್ನ ಜ್ಞಾನವೆಲ್ಲವೂ ವಿಶ್ವವ್ಯಾಪಿಯಾದ ದಿವ್ಯಜ್ಞಾನವಾಗಲಿ; ಯಾವ ಸಂದರ್ಭದಲ್ಲಿಯೂ ನಾನು ಮಾಡಿದ ಅವಲೋಕನವೆಲ್ಲವೂ ಪೂರ್ತಿಯಾಗಿ ಶಿವತತ್ತ್ವದ ಅವಲೋಕನವಾಗಲಿ; ಚೆನ್ನಾಗಿ ಆಲೋಚಿಸಿ

1 ಡ 2 ಗಲಕ್ಕ 3 ಪುದಾ 4 ದ 5 ತ

ನೋಡಿ, ನಾನು ಇಷ್ಟನ್ನು ಮಾತ್ರ ನಿಮ್ಮಲ್ಲಿ ಬೇಡುತ್ತೇನೆ; ಇನ್ನೇನಿದ ಯಾವವನ್ನೂ ನಾನು ಇಷ್ಟಪಡುವುದಿಲ್ಲ, ಶ್ರೀ ಚಂದ್ರಚೂಡಾಮಣೀ.

ಬಗೆ–ಮನಸ್ಸು. ಯೋಗ–(ಪರಮಾತ್ಮನಲ್ಲಿ, ಇಷ್ಟದೈವದಲ್ಲಿ) ಒಂದಾಗುವ, ಐಕ್ಯತೆ ಪಡೆಯುವ, ಆಧ್ಯಾತ್ಮಿಕ ಸಾಧನೆ. ಚಯ – ಸಮೂಹ; ರಾಶಿ. ನೆಗಳ್ – ಮಾಡು, ಕೈಕೊಳ್ಳು. ಅವಲೋ(ಳೋ)ಕನ–ಆರಯ್ಯುವುದು, ವಿಚಾರವಿಮರ್ಶೆ, ಪರಾಮರ್ಶನ. ಬಗೆ–ಆಲೋಚಿಸು, ವಿಚಾರಮಾಡು.

ಉದಯಾದಿತ್ಯನ ಸಂಧಿವಿಗ್ರಹಿಲಲಾಮಂ ನಾಗವರ್ಮಂ ಸಮಂ-
ತುದಯಾದಿತ್ಯನ ರಾಯಭಾರಿಯೆನಿಸಿದರ್ಾ[1]ತ್ಮಾಗ್ರಜಂ[1] ಭಾಸ್ಕರಂ
ಮೊದಲಾದೀಶ್ವರಭಕ್ತರಪ್ಪವರ್ಗೆ ಪೇೞ್ದೀಜ್ಞಾನಸಾರಂ ಸುಖಾ-
ಸ್ಪದಮೊಲ್ದೋದುಗೆ ಭುಕ್ತಿಮುಕ್ತಿ ಫಲಮಂ(ದಂ ?) ಶ್ರೀ ಚಂದ್ರಚೂಡಾಮಣೀ ೧೦೨

೧೦೨ ಉದಯಾದಿತ್ಯನ ರಾಯಭಾರಿ ಎನ್ನಿಸಿದ ತನ್ನ ಅಣ್ಣ ಭಾಸ್ಕರ ಮೊದಲಾದ ಈಶ್ವರಭಕ್ತರಾದವರಿಗೆ ಉದಯಾದಿತ್ಯನ ಶ್ರೇಷ್ಠ ಸಂಧಿವಿಗ್ರಹಿಯಾದ ನಾಗವರ್ಮನು ಹೇಳಿದ **ಈ ಜ್ಞಾನಸಾರ** ಎಂಬ ಕೃತಿ ಸುಖಾಸ್ಪದವಾದುದು. ಭುಕ್ತಿಮುಕ್ತಿ ಫಲದಾಯಕವಾದ (ಅಥವಾ ಭುಕ್ತಿಮುಕ್ತಿಫಲರೂಪವೇ ಆದ) ಇದನ್ನು (ಜನ) ಪ್ರೀತಿಯಿಂದ ಓದುವುದಾಗಲಿ, ಶ್ರೀ ಚಂದ್ರಚೂಡಾಮಣೀ.

ಸಂಧಿವಿಗ್ರಹಿ – ದೇಶವಿದೇಶಗಳೊಂದಿಗೆ ಸ್ನೇಹಸಂಬಂಧದ ಒಪ್ಪಂದ, ಯುದ್ಧದ ಪ್ರಸ್ತಾವ, ಇವುಗಳನ್ನು ನಡಸುವ ಸಚಿವ. ಆತ್ಮಾಗ್ರಜ–ಸ್ವಂತ ಅಣ್ಣ. ಭುಕ್ತಿ–ಐಹಿಕ ಸುಖಾನುಭೋಗ.

ಇದನಾವಂ ನಿಜಭಕ್ತಿ[2][ಮಾ][2]ವರಿಸದಿಂ ಪೇೞ್ದಾತನಾವಂ ಮನೋ-
ಮುದದಿಂದಂ ಸ್ತುತಿಯಿಪ್ಪನಾವ ಕವಿಗಂ ಮಾಹೇಶ್ವರೀಶಂ ವರ-
ಪ್ರದಹಸ್ತಂ ಪ್ರಮದಾವಲೋಕನ ಸುಖಾನಂದಾಶ್ರು ಕೋಟ್ಯರ್ಕಸಂ-
ಪದ ತೇಜೋನಿಧಿ ಮಾ[3][ಟ್ಕೆ][3]ಭೀಷ್ಟಫಲಮಂ ಶ್ರೀ ಚಂದ್ರಚೂಡಾಮಣೀ ೧೦೩

೧೦೩ ಇದನ್ನು ಯಾವಾತನು ನಿಜವಾದ (ಎಂದರೆ ಪ್ರಾಮಾಣಿಕವಾದ) ಭಕ್ತಿಯ ಮಹಾವರ್ಷವನ್ನು ಸುರಿಸುತ್ತಾ ಹೇಳಿದನೋ, ಯಾವಾತನು ಮನಃಪೂರ್ತಿಯಾದ ಸಂತೋಷದಿಂದ ಸ್ತೋತ್ರಮಾಡುವನೋ ಆ ಕವಿಗೆ, ಪಾರ್ವತೀಪತಿಯೂ ವರದ-ಹಸ್ತನೂ ತನ್ನ ಮಡದಿಯನ್ನು ಅವಲೋಕಿಸುವುದರಿಂದ ಉಂಟಾದ ಸುಖಾನಂದ-

1 ತ್ಮಾಜರ್ (ಮು₁); ತ್ಮಗ್ರಜಂ (ಮು$_C$) 2 ವಾ 3 ಡ

ಬಾಷ್ಪವುಳ್ಳವನೂ ಕೋಟಿಸೂರ್ಯರ ತೇಜಸ್ಸನ್ನು ಉಳ್ಳವನೂ ಆದ ಶ್ರೀ ಚಂದ್ರ-ಚೂಡಾಮಣಿ ಇಷ್ಟಾರ್ಥಫಲವನ್ನು ಉಂಟುಮಾಡಲಿ.

ಮಹಾವರಿಷ – ಮಹಾವರ್ಷ; ಸುರಿಮಳೆ. ಮಾಹೇಶ್ವರೀ – ಮಹೇಶ್ವರಶಕ್ತಿ. ವರಪ್ರದ–ವರವನ್ನು ಕೊಡುವ. ಪ್ರಮದಾ–(ಚೆಲುವೆಯಾದ) ಹೆಂಡತಿ. ಅರ್ಕ–ಸೂರ್ಯ. ಮಾಟಿಕ್ಕೆ–ಮಾಡಲಿ.

ಇತಿ ಶ್ರೀ ಚಂದ್ರಚೂಡಾಮಣಿ ಶತಕಂ ಸಂಪೂರ್ಣಂ

ಇಲ್ಲಿಗೆ ಶ್ರೀ ಚಂದ್ರಚೂಡಾಮಣಿ ಶತಕವು ಸಂಪೂರ್ಣವಾಯಿತು.

# ಒಪ್ಪೋಲೆ

[ಮೊದಲಿನ ಸಂಖ್ಯೆ ಪದ್ಯದ್ದು; ಎರಡನೆಯದು ಪಾದಸಂಖ್ಯೆ. ಗದ್ಯದ ಭಾಗದಲ್ಲಿ ಪದ್ಯಸಂಖ್ಯೆಯ ಮುಂದೆ ಗ ಎಂದಿದ್ದು, ಎರಡನೆಯ ಸಂಖ್ಯೆ ಗದ್ಯಭಾಗದ ಪಂಕ್ತಿಯ ಸಂಖ್ಯೆ. ಅ = ಅರ್ಥಭಾಗ. ಅ.ಟಿ. = ಅಡಿಟಿಪ್ಪಣಿ.]

| | ತಪ್ಪು | ಒಪ್ಪು |
|---|---|---|
| ೧-೧ | ಮಯ್ಯಾಂತು | ಮುಯ್ಯಾಂತು |
| ೭-೩ | [ತೆಜೂಳ್ನಾಯೆಂದೆದ] | 1[ತೆಜದೊಳ್ನಾಯುದ]1 |
| ೭-೪ | ಪೇಳಜಿ | ಪೇಟಿಜಿ |
| ೮-೧ | ಮಾಳ್ಪ | ಮಾಟ್ಪಿ |
| ೧೦-೩ | ಟ್ಟಿತ | ಟ್ಟಿತು |
| ೧೨-೨ | ವತ್ | [ವತ್] |
| ೧೪-೧ | ಉಡಿಸುತ್ತು— | ಉಡಿಸುತ್ತೊ— |
| ,, | [ದು]ಳಿಸುತಂ | [ದು]ಟಿಸುತಂ |
| ೧೭-೩ | ಗಾರುಡಿಗನಂತಾ | ಗಾರುಡಿಗನಂ ತಾ |
| ೨೨-೨ | [ಲ್ಪು] | 1a[ಲ್ಪು]1a |
| ,, | ಮೇಲಿನದಕೆ ಅಡಿಟಿಪ್ಪಣಿ ಇಲ್ಲ | ಅಡಿಟಿಪ್ಪಣಿ: 1aಳ್ಪು |
| ೨೮-೧ | 1[ವ]1ರ (ಅಡಿಟಿಪ್ಪಣಿ) | 1[ದ]1 |
| ೩೦-೫ | ಅಪಡೆ | ಅಪಡೆ |
| ೩೨-೪ | [ಬಿ]ನೆರಡು | [ಬಿ]ನೆರಡು |
| ೩೨-೫ | ಪ್ರೀಪಿ | ಪ್ರೀತಿ |
| ೩೩-ಅ.ಟಿ | 2 ಮ | 2 ಮು |
| ೩೩-೪ | ನುಜಿದವಂ | ನುಜಿದವಂ |
| ೩೬-೧ | 2[ಮಾ] | 2[ರ್ಮಮಾ] |
| ೪೯-೩ | 5ಯೆಂಬ5 | 5[ಯೆಂಬ]5 |
| ೫೦-೧ | ಅ. (ಕ್ಷ್ಮಾದ್ರ) | –(ಕ್ಷ್ಮಾಧ್ರ) |
| ೫೨-೩ | 2ದೇಂ2 | 2[ದೇಂ]2 |
| ೫೫-೧ | 1ನೆಟ್ಟಿರನೇ1 | 1[ನೆಟ್ಟಿರನೇ]1 |
| ೫೭-೩ | 2ಗ2 | 2[ಗ]2 |
| ೬೨-೧ | 1ಮುಂ1 | 1[ಮುಂ]1 |
| ೬೨-೪ | 1[ತಿ]1 | 2[ತ್ರಿ]2 |

| | ತಪ್ಪು | ಒಪ್ಪು |
|---|---|---|
| ೬೩–೨ | $^{2}$ಜಂ$^{2}$ | $^{3}$[ಜಂ]$^{3}$ |
| ೬೩–೩ ಅ.ಟಿ | ಅ.ಟಿ. ಇಲ್ಲ | 3 ದಂ ಎಂದು ಸೇರಿಸಬೇಕು. |
| ೬೫–೧ | $^{2}$ಸೇರಿ$^{2}$ | $^{2}$[ಸೇರಿ]$^{2}$ |
| ೬೫–೪ | $^{2}$ವು$^{2}$ | $^{3}$[ಮು]$^{3}$ |
| ೬೬–೩ | $^{3}$ವೆ$^{3}$ | $^{3}$[ವ]$^{3}$ |
| ೬೮–೧ | ಬೆಡುಮುಂ | ಬೆಡುವಂ |
| ೭೦–೪ | ರಂತಱ$^{3}$ಗುಂ | ರಂತಱಿಗುಂ |
| ೭೧–೧ | [ಶ್ರೈ] | [ಶ್ಚೈ] |
| ೮೧–೪ | $^{4}$[ಭು]$^{4}$ | 4 ಭ—ಈ ಅ.ಟಿ. ಬಿಟ್ಟುಹೋಗಿದೆ. |
| ೧೦೩–೧ | ಷೇಟಿಾ | ಷೇಟ್ವಾ (ಱ್ವಾ) |

---

ಪರಿಶಿಷ್ಟ : ಬಳಸಿಕೊಂಡ ಹಸ್ತಪ್ರತಿಯಲ್ಲಿ ಱಕಾರ ೞಕಾರ ಪ್ರಯೋಗವಾಗಿಲ್ಲ. ಹರಿಹರಪೂರ್ವ ಪ್ರಾಚೀನ ಕವಿ ಆದ್ದರಿಂದ ಈ ವರ್ಣಗಳನ್ನು ಬಳಸಿದೆ. —ಸಂ.

# ಪ್ರತಿಷ್ಠಾನದ ಪ್ರಕಟನೆಗಳು

| | | |
|---|---|---|
| 1. | ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ) | 50-00 |
| 2. | ಬೇಂದ್ರೆ ಸ್ಮೃತಿ (ಸಾಹಿತ್ಯ ಭಂಡಾರದಲ್ಲೂ ದೊರೆಯುತ್ತದೆ) | 5-00 |
| 3. | ಸರ್ವಜ್ಞ ವಚನಗಳು* | 15-00 |
| 4. | ಸೂತ ಭಾರತ* | 15-00 |
| 5. | ಶ್ರೀಕೃಷ್ಣದೇವರಾಯ ದಿನಚರಿ* | 10-00 |
| 6. | ಹಸ್ತಪ್ರತಿ ಶಾಸ್ತ್ರ* | 15-00 |
| 7. | ಮಾಸ್ತಿ ಸ್ಮರಣೆ | 15-00 |
| 8. | ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ—ಭಾಗ-೧* | 20-00 |

## ದತ್ತಿ ಉಪನ್ಯಾಸ ಮಾಲೆ

| | | |
|---|---|---|
| 9. | ಮೂರು ದತ್ತಿ ಉಪನ್ಯಾಸಗಳು | 10-00 |
| 10. | ವೈವಸ್ವತ ಮನು | 5-00 |
| 11. | ಸ್ವಾಯಂಭುವ ಮನು : ವೈವಸ್ವತ ಮನು-ತೌಲನಿಕ ಅಧ್ಯಯನ | 5-00 |
| 12. | ಮೂರು ದತ್ತಿ ಉಪನ್ಯಾಸಗಳು—೧೯೮೪ | 10-00 |
| 13. | ದತ್ತಿ ಉಪನ್ಯಾಸಗಳು—೧೯೮೫ | 10-00 |

## ತಿಮ್ಮಪ್ಪದಾಸ ಪ್ರಕಾಶನ ಮಾಲೆ

| | | |
|---|---|---|
| 14. | ಕೀರ್ತನ ಕುಸುಮಾಂಜಲಿ | 10-00 |
| 15. | ಧ್ರುವ ಚರಿತ್ರೆ* | 15-00 |
| 16. | ಶ್ರೀ ಕೃಷ್ಣಬಾಲಲೀಲೆ ಭಾಗ-೧* | 75-00 |
| 17. | ,, ಭಾಗ-೨* | 75-00 |

## ಶ್ರೀ ಜನ್ಮಶತಾಬ್ದಿ ಕೃತಿಮಾಲೆ

| | | |
|---|---|---|
| 18. | ಶ್ರೀವಾಣಿ (ಸೂಕ್ತಿ ಸಂಗ್ರಹ) | 1-00 |
| 19. | ಆಚಾರ್ಯ ಬಿ.ಎಂ.ಶ್ರೀ. (ಜೀವನ ಚಿತ್ರ) | 2-00 |
| 20. | ಕನ್ನಡ ಕಣ್ವ ಬಿ.ಎಂ.ಶ್ರೀ. (ಮಕ್ಕಳಿಗೆ) | 1-00 |
| 21. | ಶ್ರೀಯವರ ಆಯ್ದ ಕವನಗಳು | 2-00 |
| 22. | ಶ್ರೀನಿಧಿ (ಸಂಸ್ಮರಣ ಸಂಪುಟ) | 60-00 |
| 23. | B.M.S.: The Man and His Mission | 25-00 |
| 24. | ಶ್ರೀಗಂಧ (ಸಂಸ್ಮರಣ ಸಂಚಿಕೆ) | 10-00 |
| 25. | ಇಂಗ್ಲಿಷ್ ಗೀತಗಳು (ಆಂಗ್ಲ ಮೂಲ ಕವನಗಳೊಂದಿಗೆ) | 20-00 |
| 26. | The Improvement of Kannada—B.M.Sri. | 6-00 |
| 27. | ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯ | 4-00 |
| 28. | ಭಾರತದ ಶ್ರೀಕೃಷ್ಣ | 6-00 |
| 29. | ಅಶ್ವತ್ಥಾಮ ('ಶ್ರೀ' ನಾಟಕದ ಸರಳಾನುವಾದ) | 6-00 |
| 30. | Early Vijayanagara : Studies in History & Culture | 60-00 |

* ಈ ಪುಸ್ತಕಗಳಿಗೆ ಪ್ರತಿಷ್ಠಾನದ ಸದಸ್ಯರಿಗೆ ಶೇ. 50 ರಿಯಾಯಿತಿ.